# ಅನ್ಯಾಯಗಳ ಬಗ್ಗೆ ಜನರನ್ನು ಎಚ್ಚರದಿಂದಿಡಲು: ಜಾಥಾ

ಮೊನ್ನೆ ಕರ್ನಾಟಕ ದಲಿತ ಸಂಘರ್ಷ ಸಮಿತಿಯ ರಾಜ್ಯ ಸಂಚಾಲಕರಾದ ಶ್ರೀ ಎಂ. ಡಿ. ಗಂಗಯ್ಯನವರ ಮೇಲೆ ಮೂಡಿಗೆರೆಯ ಸರ್ಕಲ್ ಇನ್ಸ್‌ಸ್ಪೆಕ್ಟರ್ ಷರೀಫ್ ನಡೆಸಿದ ಹಲ್ಲೆಯ ಪ್ರತಿಧ್ವನಿಯಾಗಿ ಚಿಕ್ಕಮಗಳೂರು ಜಿಲ್ಲೆಯ ಜನ ಷರೀಫನ ವಿರುದ್ಧ ತಿರುಗಿ ಬಿದ್ದಿದ್ದಾರೆ. ಸಿಕ್ಕ ಸಿಕ್ಕಲಿ ಷರೀಫನಿಗೆ ಉಗುಳುವ ಮಟ ಜನ ಚಳಿಬಿಟ್ಟು ನಿಂತಿದ್ದಾರೆ. ಇವೆಲ್ಲವುಗಳಿಂದ ರೋಸಿಹೋಗಿ ತಲೆ ಮರೆಸಿಕೊಳ್ಳಲು ಷರೀಫ ಹಗಲು ರಾತ್ರಿ ಟ್ರಾನ್ಸ್‌ಫರ್‌ಗಾಗಿ ಓಡಾಡುತ್ತಿದ್ದಾನೆಂದು ವದಂತಿಯಾಗಿದೆ. ಇದೇ ವಿಷಯಕ್ಕೆ ಇತ್ತೀಚೆಗೆ ಚಿಕ್ಕಮಗಳೂರಿಗೆ ಭೇಟಿ ನೀಡಿದ್ದ ಡಿ. ಐ. ಜಿ. ರೇವಣಸಿದ್ದಯ್ಯ "ಈ ಷರೀಫನಿಂದಾಗಿ ನಮ್ಮ ಇಡೀ ಪೋಲೀಸ್ ಇಲಾಖೆಗೇ ಕೆಟ್ಟ ಹೆಸರು" ಎಂದು ತಲೆ ಮೇಲೆ ಕೈ ಇಟ್ಟುಕೊಂಡು "ಈತನ ಮೇಲೆ ಕೂಡಲೆ ಕ್ರಮ ಕೈಗೊಳ್ಳುತ್ತೇವೆ." ಎಂದು ಡಿ. ಎಸ್ ಎಸ್. ಕಾರ್ಯಕರ್ತರಿಗೆ ಆಶ್ವಾಸನೆ ನೀಡಿದ್ದಾರೆ.

ಜಾಣ ಪೋಲೀಸು ರೇವಣಸಿದ್ದಯ್ಯನವರು ತನ್ನ ಆಶ್ವಾಸನೆಗಳಿಂದ ಜನರನ್ನು ಮರುಳು ಮಾಡಬಲ್ಲೆ ಎಂದುಕೊಂಡಿದ್ದರೆ, ಅದಕ್ಕೂ ಜನ ಎಚ್ಚೆತ್ತುಕೊಂಡಿದ್ದಾರೆ. ಅನ್ಯಾಯಗಳ ವಿರುದ್ಧ ಜನರನ್ನು ಸದಾ ಎಚ್ಚರದಲ್ಲಿರಿಸಲು ದಲಿತ ಸಂಘರ್ಷ ಸಮಿತಿಯ ಕಾರ್ಯಕರ್ತರು ಮೂಡಿಗೆರೆಯಿಂದ ಚಿಕ್ಕಮಗಳೂರು ತನಕ ಕಾಲ್ನಡಿಗೆ ಜಾಥಾ



ಪೋಲೀಸು ದೌರ್ಜನ್ಯದ ವಿರುದ್ಧ ಮೂಡಿಗೆರೆಯಿಂದ ಚಿಕ್ಕಮಗಳೂರು ಕಡೆಗೆ ನಡೆದಿರುವ **ಜಾಥಾ**

**ಎಂ. ಪಿ. ರಾಜಣ್ಣ**

ಮಾಡಿದ್ದಾರೆ. ಹಳ್ಳಿ ಹಳ್ಳಿ ಹಳ್ಳಿಗಳನ್ನು ಸುತ್ತಿ ಕೊಲೆಗಡುಕ ಜಮೀನುದಾರರ ಬಗ್ಗೆ. ಜಮೀನುದಾರರ ಕಾಲು ನೆಕ್ಕುವ ಕ್ರೂರ ಪೋಲೀಸರ ಬಗ್ಗೆ ಕೊಲೆಸುಲಿಗೆಗಳ ಮೇಲೆ ಗೊರಕೆ **ಹೊಡೆವ** ಕೊಳಕು ಸರ್ಕಾರದ ಬಗ್ಗೆ ಜನರ ಮನ ನಾಟುವಂತೆ ಬಿಡಿಸಿ ಹೇಳಿದ್ದಾರೆ. ಜಾತಿ–ಮತಗಳನ್ನು ಮೀರಿ ಸಾವಿರಾರು ನೊಂದ ಜನರು ಕಾಲುನಡಿಗೆ ಜಾಥಾದಲ್ಲಿ ಪಾಲ್ಗೊಂಡು ಷರೀಫನಿಗೆ ಭೇದಿ ಹೊಡೆಸಿದ್ದಾರೆ. ಅನ್ಯಾಯಗಳ ವಿರುದ್ಧ ಏಳುವ ಪ್ರಾಮಾಣಿಕ ದನಿಯನ್ನು ಯಾರೂ ಹಿಸುಕಿ ಹಾಕಲಾರರು ಎನ್ನುವುದನ್ನು ಸಾಬೀತು ಪಡಿಸಿದ್ದಾರೆ.


# ಪಂಚಮ

ಸಂಪುಟ : 6 ಸಂಚಿಕೆ : 12–13 ಬೆಲೆ : 50 ಪೈಸೆ ಜುಲೈ 82


## ದಲಿತ ಪಾಂಥರ್ ಅಧ್ಯಕ್ಷರಿಗೆ ಜೀವಾವಧಿ ಶಿಕ್ಷೆ

### ಸಂಘರ್ಷ ಸಮಿತಿ ಆತಂಕ

ಮಹಾರಾಷ್ಟ್ರದ ದಲಿತ ಪಾಂಥರ್ಸ್ ಅಧ್ಯಕ್ಷ ಶ್ರೀ ಗಂಗಾಧರ್ ಗಾಡೆ ಅವರಿಗೆ ಔರಂಗಾಬಾದ್‌ನ ಸೆಷನ್ಸ್ ಕೋರ್ಟು ಜುಲೈ ೧೨ ರಂದು ವಿಧಿಸಿರುವ ಜೀವಾವಧಿ ಶಿಕ್ಷೆ ದೇಶಾದ್ಯಂತ ಬೆಳೆದಿರುವ ದಲಿತ ಸಂಘಟನೆಗಳಲ್ಲಿ ಆತಂಕ ಉಂಟುಮಾಡಿದೆ. ಕರ್ನಾಟಕ ದಲಿತ ಸಂಘರ್ಷ ಸಮಿತಿಯು ತನ್ನ ತೀವ್ರ ಆತಂಕದೊಂದಿಗೆ ಶ್ರೀ ಗಂಗಾಧರ್ ಗಾಡೆ ಮತ್ತು ದಲಿತ ಪಾಂಥರ್ಸ್ ಸಂಘಟನೆಗೆ ಪತ್ರ ಬರೆದಿದೆ.

೧೯೮೧ ರ ಆಗಸ್ಟ್ ೩೦ ರಂದು ಪೀಪಲ್ಸ್ ಎಜುಕೇಶನ್ ಸೊಸೈಟಿಯ ವಿಜ್ಞಾನ ಕಾಲೇಜಿನಲ್ಲಿ ನಡೆದ ವಿಲಾಸ್ ಶಿಂಧೆ ಎಂಬುವವರ ಕೊಲೆ ಸಂಬಂಧವಾಗಿ ಗಂಗಾಧರ್ ಗಾಡೆ ಅವರು ಜೀವಾವಧಿ ಶಿಕ್ಷೆಗೆ ಒಳಗಾಗಿದ್ದಾರೆ.

## ಸ್ವಾಭಿಮಾನಿ ದಲಿತರ ಮೇಲೆ ಸಾಮಾಜಿಕ ಬಹಿಷ್ಕಾರ !

ಗಾಂಧೀಜಿ ಬ್ರಿಟಿಷ್ ಸಾಮ್ರಾಜ್ಯಶಾಹಿಗಳ ವಿರುದ್ಧ ಹೋರಾಟ ನಡೆಸುತ್ತಿದ್ದ ಕಾಲದಲ್ಲೆ ಅಂಬೇಡ್ಕರ್ ಅಸ್ಪೃಶ್ಯತೆ ವಿರುದ್ಧ ಹೋರಾಟ ನಡೆಸಿದ್ದರು. ಅವರು ಗಾಂಧೀಜಿಯವರಿಗೆ ಕೇಳುತ್ತಿದ್ದ ಪ್ರಶ್ನೆ: "ಗಾಂಧೀಜಿ ನಿನಗೆ ಬ್ರಿಟಿಷರಿಂದ ಬಿಡುಗಡೆ ಬೇಕಾಗಿದೆ. ಆದರೆ ನನಗಾದರೋ ನಿನ್ನ ಜನಗಳಿಂದ ಬಿಡುಗಡೆ ಬೇಕಾಗಿದೆ. ಕೇವಲ 200 ವರ್ಷಗಳ ಬ್ರಿಟಿಷ್ ತುಳಿತಕ್ಕೆ ನೀನು ಇಷ್ಟು ರೋಸಿರಬೇಕಾದರೆ, 5000 ವರ್ಷಗಳು ನಿನ್ನ ಜನರಿಂದ ತುಳಿಸಿಕೊಳ್ಳುತ್ತಿರುವ ನಮಗೆ ಎಷ್ಟು ನೋವಾಗಿರಬೇಕು". ಸ್ವಾತಂತ್ರ್ಯ ಪೂರ್ವದಲ್ಲಿ ಅಂಬೇಡ್ಕರ್ ಕೇಳಿದ ಪ್ರಶ್ನೆ ಈ ಹೊತ್ತಿಗೂ ಅರ್ಥಪೂರ್ಣವಾಗಿ ಉಳಿದಿದೆ. ಗಾಂಧಿ ಮತ್ತು ಗಾಂಧಿ

15 ನೇ ಪುಟಕ್ಕೆ

ಸಮೀಕ್ಷೆ

# ಕಲ್ಲು ಬಂಡೆಗಳ ನಡುವೆ ಭುಂಯಾರ್ ದಲಿತರು

**ಗುಲಬರ್ಗಾ ಪ್ರತಿನಿಧಿಯಿಂದ**

ಭುಂಯಾರ್. ಗುಲಬರ್ಗಾ ಜಿಲ್ಲೆ ಕಮಲಾಪುರ ಹೋಬಳಿಯ ಚಿಕ್ಕ ಹಳ್ಳಿ. ಒಟ್ಟು ಮನೆಗಳು ೯೦. ಜಾತಿವಾರು ಮನೆಗಳ ಸಂಖ್ಯೆ, ಲಿಂಗಾಯತ-೨೦, ಬ್ರಾಹ್ಮಣ-೧, ಮುಸ್ಲಿಂ-೧೫, ಕುರುಬ-೧೬, ಕೋಳಿ (ಕಬ್ಬಲಿಗ)-೧೫, ಅಸ್ಪೃಶ್ಯ-೨೩. ಭುಂಯಾರ್ ಸಹ ಸೇರಿದಂತೆ ಒಟ್ಟು ೬ ಹಳ್ಳಿಗಳ ನಡುವೆ ಒಂದು ಗ್ರೂಪ್ ಗ್ರಾಮ ಪಂಚಾಯತಿ. ಪಂಚಾಯತಿ ಆಫೀಸ್ ಕಲ್ಮೂಡ್‌ನಲ್ಲಿ.

ಗ್ರಾಮದಲ್ಲಿ ಅಸ್ಪೃಶ್ಯತೆ. ದಲಿತರು ಊರಿನ ಹೊರಗೇ. ಹೋಟೆಲ್‌ಗಳಲ್ಲಿ ಪ್ರವೇಶವಿಲ್ಲ. ಶಿಕ್ಷಣ ಪಡೆದ ಯುವಕರು ಕೈಬೆರಳೆಣಿಕೆಯೊಳಗೇ ಸಿಗುವಷ್ಟು. ಹತ್ತಿರದ ಹಳ್ಳಿಗಳಲ್ಲಿರುವ (ಬೇಲೂರು, ಕೌನಳ್ಳಿ, ಅಂತಪ್ನಾಳ್, ದಿನಸಿ, ಕಲ್ಮೂಡ್, ಜೀವಣಗಿಗಳಲ್ಲಿಯು) ದಲಿತರೂ ಸಹ ಇದೇ ಬಗೆಯ ಶೋಷಣೆಗೆ ಬಲಿ. ಪ್ರತಿ ಹಳ್ಳಿಯಲ್ಲಿ ಶೇಕಡಾ ಇಬ್ಬರಿಗಾದರೂ ಸಾಕಾಗುವಷ್ಟು ಭೂಮಿಯಿಲ್ಲ. ಶೇ ೯೫ ಜನ ದಲಿತರು ಕೃಷಿ ಕೂಲಿಕಾರರು; ಭೂರಹಿತರು. ಸರ್ಕಾರ ಬೊಬ್ಬೆ ಹಾಕುವ "ಭೂರಹಿತರಿಗೆ ಭೂಮಿ ಹಂಚುವ ಕಾರ್ಯಕ್ರಮ" ಎಲ್ಲಿ? ಸರ್ಕಾರಿ ತಕ್ಕಾರರು, ಮಂತ್ರಿ-ಕಂತ್ರಿಗಳು ಉತ್ತರಿಸಬೇಕು.

ಭುಂಯಾರ್ ಗ್ರಾಮದ ಸರಹದ್ದಿನಲ್ಲಿರುವ ಕಲ್ಲು-ಬಂಡೆಗಳಿಂದ ತುಂಬಿಕೊಂಡಿದ್ದ ಸುಮಾರು ೩೧ ಎಕರೆ ಜಮೀನನ್ನು ಭುಂಯಾರ್‌ದ ಭೂರಹಿತ ದಲಿತರು ೧೯೭೯-೮೦ ನೇ ಸಾಲಿನಲ್ಲಿ ಬೆವರು-ರಕ್ತ ಹರಿಸಿ ಸಾಗುವಳಿ ಯೋಗ್ಯ ಮಾಡಿದರು. ಹೆಣ್ಣು-ಗಂಡು ಎಲ್ಲಾ ಸೇರಿ ಕಲ್ಲು-ಬಂಡೆಗಳ ಭೂಮಿಯಲ್ಲಿ ಬೆವರು ಸುರಿಸ ತೊಡಗಿದ್ದ ಕಂಡು ಎಷ್ಟೋ ಜನ ಸವರ್ಣೀಯರು ನಕ್ಕದ್ದುಂಟು; ಗೇಲಿ ಮಾಡಿದ್ದುಂಟು.

೧೯೮೦-೮೧ ರ ವರ್ಷದಲ್ಲಿ ಭೂರಹಿತ ದಲಿತರು ಗುಲಬರ್ಗಾ ಜಿಲ್ಲಾಧಿಕಾರಿ, ತಹಸೀಲ್ದಾರರಿಗೆ ಮನವಿ ಪತ್ರ ಸಲ್ಲಿಸಿದರು. ಬಿತ್ತನೆ ಬೆಳೆ ಬರುತ್ತದೆ ಎಂಬ ತಾತ್ಸಾರದಿಂದಲೋ ಏನೋ ಆ ವರ್ಷ ಊರಿನ ಸವರ್ಣೀಯರಿಂದ ಯಾವ್ಯತೊಂದರೆಯೂ ಆಗಲಿಲ್ಲ. ದಲಿತರು ಬೆಳೆ ಪಡೆದರು. ತಾವು ಉತ್ತು-ಬಿತ್ತಿ ಬೆಳೆದ 'ತಮ್ಮ' ಭೂಮಿಯ ಜೋಳ ಕಂಡು ಕಪ್ಪು ಮುಖಗಳು ಹಿಗ್ಗಿದವು.

ಮುಂದಿನ ವರುಷ ಇನ್ನಷ್ಟು ಉತ್ಸಾಹದಿಂದ ಭೂಮಿಯನ್ನು ಇನ್ನೂ ಹದಗೊಳಿಸಿ ಬಿತ್ತನೆ ಮಾಡಿದರು. ಬೆಳೆ ಆಳೆತ್ತರ ಬೆಳೆದು ತೂಗಾಡುತ್ತಾ ನಲಿಯುತ್ತಿತ್ತು. ೧೯೮೨ ರ ಜನವರಿ ಕೊನೆಯಲ್ಲಿ ಬೆಳೆ ಕೊಯ್ದು ಸುಗ್ಗಿ ಮಾಡುವ ದಿನಗಳು. ದಲಿತರ ಪಾಲಿಗೆ ಕರಾಳ ದಿನಗಳಾದವು. ಗ್ರಾಮದ ಜಾತ್ಯಾಂಧ ಸವರ್ಣೀಯರ ಹೃದಯಗಳಿಗೆ ದಲಿತರ ಭೂಮಿಯಲ್ಲಿಯ ಈ ಬೆಳೆ ಮುಳ್ಳಾಯಿತೇನೋ. ?

೧-೨-೮೨ ರಂದು ಬೆಳಿಗ್ಗೆ ಗುಂಪುಗಟ್ಟಿ ಬಂದು ದಲಿತರು ನೋಡುತ್ತಿದ್ದ ಹಾಗೆಯೇ ಊರಿನ ಸವರ್ಣೀಯರು ಬೆಳೆ ಕೊಯ್ದು ಒಯ್ದರು; ತಮ್ಮ ದನ-ಕರು ಬಿಟ್ಟು ಬೆಳೆ ನಾಶ ಮಾಡಿದರು. ಅದೇ ದಿನ ಮಹಾಗಾಂವ್ ಪೋಲೀಸ್ ಠಾಣೆಗೆ ಬಂದು ದಲಿತರು ದೂರು ನೀಡಿದರು. ಜಿಲ್ಲೆಯ ಸಂಬಂಧಪಟ್ಟ ಇತರ ಅಧಿಕಾರಿಗಳಿಗೂ ಈ ಬಗ್ಗೆ ದೂರನ್ನು ನೀಡಲಾಯಿತು

ಪರಿಣಾಮ ಶೂನ್ಯ. ದಲಿತರ ಅರ್ಜಿಗೆ ಉತ್ತರವಾಗಿ ಬಂದು ವಿಚಾರಣೆಯ ನಾಟಕ ನಡೆಸಿ ಹೋಗಿರುವ ಪೋಲೀಸ್ ಅಧಿಕಾರಿಗಳು ಈ ಎಲ್ಲಾ ಸಂಗತಿಯೂ "ಆಧಾರ ರಹಿತ" ಎಂದು ವರದಿಮಾಡಿ ಕೊಡು ಹೋಗಿದ್ದಾರೆ. ದಲಿತರು ಶೂನ್ಯದತ್ತ ತಮ್ಮ ದೃಷ್ಟಿ ನೆಟ್ಟು ಕುಳಿತಿದ್ದಾರೆ.

ಮತ್ತೆ ಮಳೆಗಾಲ ಬಂದಿದೆ. ಸವರ್ಣೀಯರ ಕಣ್ಣು ಇನ್ನೂ ದಲಿತರು ಹಸನು ಮಾಡಿರುವ ಭೂಮಿಯ ಮೇಲಿದೆ. ಸರ್ಕಾರಿ ಅಧಿಕಾರಿಗಳು ಪಟ್ಟಭದ್ರ ವ್ಯವಸ್ಥೆಯ-ಸಿರಿವಂತರ ಜೇಬಿನಲ್ಲಿ ನಿದ್ರೆ ಹೊಡೆಯುತ್ತಿದ್ದಾರೆ.

ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಜಿಲ್ಲಾ ಶಾಖೆಯ ಆಶ್ರಯ ಪಡೆದು ದಲಿತರು ಮತ್ತೆ ಭೂಮಿ ಬಗ್ಗೆ ಸರ್ಕಾರಿ ಅಧಿಕಾರಿಗಳಿಗೆ ಅರ್ಜಿ ಸಲ್ಲಿಸಿದ್ದಾರೆ. ದ. ಸಂ. ಸ. ಒತ್ತಾಸೆಯಿಂದ ವಿರೋಧ ಎದುರಿಸಿಯೂ ಈ ಮಳೆಗೆ ಬಿತ್ತನೆ ನಡೆಸಲು ಸಿದ್ಧರಿದ್ದಾರೆ; ಸಂಘರ್ಷ ಅನಿವಾರ್ಯವಾಗುವುದೇನೋ? ಅರ್ಜಿ ಪಡೆದಿರುವ ಸರ್ಕಾರಿ ಅಧಿಕಾರಿಗಳ ಕೈಗಳಿಗೆ-ಕಾಲ್ಗಳಿಗೆ ಚಾಲನೆ ಬರುವುದೋ ಅಥವಾ ಸತ್ತವರಂತೆ ನಿಷ್ಕ್ರಿಯರಾಗಿಯೇ ಉಳಿಯುವುವೋ ಕಾದುನೋಡುತ್ತಿದ್ದಾರೆ.

## ಕುರಿ ಕುಯ್ದು ದಲಿತರನ್ನು ಕುರಿಗಳನ್ನಾಗಿಸಿದ ದಾಸೇಗೌಡ!

ಸ್ವಲ್ಪ ದಿವಸದ ಹಿಂದೆ ಗೆಳೆಯರಾದ ಶ್ರೀನಿವಾಸ್‌ರವರೊಂದಿಗೆ ಅವರ ಊರಿಗೆ ಭೇಟಿ ಕೊಟ್ಟಿದ್ದೆವು. ಸಂಘಟನೆಯಲ್ಲಿ ಆಸಕ್ತಿ ಉಳ್ಳ ಅವರೊಂದಿಗೆ ಉತ್ಸಾಹದಿಂದ ನಡೆದು ಹೋಗಿದ್ದೆ. ಊರಿನ ಹಲವು ಯುವಕರನ್ನು ಕಂಡು ಅವರ ಸ್ಥಿತಿಗತಿಗಳ ಬೇಡಿಗಳನ್ನು ವಿವರಿಸಿದೆವು. ಅಂಥಾ ವೇಳೆಯಲ್ಲೆ ಆ ಅಗಸನಪುರದಲ್ಲಿ ಒಂದು ಘಟನೆ ನಡೆದಿತ್ತು.

ಮಳವಳ್ಳಿ ತಾಲೂಕಿನ ಕಸಬಾ ಹೋಬಳಿಯ ಈ ಹಳ್ಳಿಯಲ್ಲಿ ಅಸ್ಪೃಶ್ಯ ಕೋಮಿನವರು ಶೇ. 20 ಭಾಗವಿದ್ದಾರೆ. ಉಳಿದವರು ಒಕ್ಕಲಿಗ ಲಿಂಗಾಯಿತ ಹಿಂದುಳಿದ ವರ್ಗಗಳಿಗೆ ಸೇರಿದ ಸವರ್ಣೀಯರು. ದಲಿತರಿಗೆ ಚೂರುಪಾರು ಜಮೀನು ಇದ್ದು ಸವರ್ಣೀಯರಿಗೆ ಹೆಚ್ಚು ಕಡಿಮೆ ಎಲ್ಲರಿಗೂ ಇನ್ನು ಉತ್ತಮ ಮಟ್ಟದಲ್ಲಿದ್ದಾರೆ. ಇಂಥ ಉತ್ತಮ ಮಟ್ಟದ ಜನಗಳಲ್ಲಿ ಗೌಡನ ಮಗ ದಾಸೇಗೌಡ ನಿಮಿರಿ ನಿಲ್ಲುತ್ತಾನೆ. ದಾಸೇಗೌಡನು ಹಣಕಾಸಿನ ವಿಚಾರದಲ್ಲಿ ಜಗಳ ನಡೆದು ದಲಿತನೊಬ್ಬನಿಗೆ ಚಪ್ಪಲಿಯಲ್ಲಿ ಹೊಡೆದ. ಜಾತಿಯ ಅಪಮಾನತೆಯ ಗಾಯಗಳಿಂದ ಆವರಿಸಿರುವ ದಲಿತ ಮನಸ್ಸುಗಳು ಚಪ್ಪಲಿಯಿಂದ ಹೊಡೆಸಿಕೊಂಡ ದಲಿತನನ್ನು ಕುಲದಿಂದ ಹೊರಹಾಕಿ ಬಹಿಷ್ಕರಿಸಿದವು.

ಬಹಿಷ್ಕರಿಸಲ್ಪಟ್ಟ ದಲಿತನನ್ನು ಗುಟ್ಟಾಗಿ ದಾಸೇಗೌಡ ಕರೆಸಿ ಕುಲಕ್ಕೆ ಸೇರಿಸಿಕೊಳ್ಳಲು ಬೇಕಾದ್ದನ್ನು ಪರಿಹಾರವಾಗಿ ಕೊಡಲು ಒಪ್ಪಿದನು. ಅದೇ ರೀತಿ ಕುರಿಯೊಂದನ್ನು ಕುಯ್ದು ಅಡಿಗೆ ಮಾಡಿ ಕುಲಪೂಜೆ ನಡೆಸಿದರಂತೆ. ಚಪ್ಪಲಿಯಲ್ಲಿ ಹೊಡೆಸಿಕೊಂಡ ದಲಿತನನ್ನು ಪೂಜೆಯೊಂದಿಗೆ ಹಸೆ ಏರಿಸಿದರಂತೆ; ಪವಿತ್ರತೆಯೊಂದಿಗೆ ಕುಲದಡೆಗೆ ಬಂದನಂತೆ.

ಓದುಗ ದಲಿತರೆ, ನನ್ನ ಪ್ರಶ್ನೆ: ಹಸೆಯೇರಿದ ಮಾತ್ರಕ್ಕೆ ಕುಲ ಉತ್ತಮವಾಯಿತೆ? ಅವಮಾನ ಹೋಯಿತೆ? ಗೌಡ ಬರೀ ಒಂದು ಕುರಿ ಕೊಟ್ಟು ದಲಿತರನ್ನು ಕುರಿಯಾಗಿಸಿದನೆ? ಹಸೆಯಲ್ಲಿ ಯಾವುದೆ ಅಧಿಕಾರಿಯ ಸ್ಥಾನ (ರಾಷ್ಟ್ರಪತಿ, ಮುಖ್ಯಮಂತ್ರಿ) ಕೊಟ್ಟರೂ ಅವಮಾನ ಹೋಗುವುದಿಲ್ಲ, ತಮ್ಮ ಕುಲದೊಳಗೆ ಸೇರಿಸಿಕೊಳ್ಳದೆ ಮಾದಿಗ ಕುಲಕ್ಕೆ ಮತೆ ಯಾಕೆ ಸೇರಿಸಲು ಗೌಡ ಅನುವಾದ?

ಪರಿಹಾರ: ಮೇಲಿನಂಥ ಜಾತೀ ಕ್ರಿಯೆಗಳನ್ನು ಪರಿಹರಿಸಲು ಜನರತ್ತಿರ ನಿಕಟ ಸಂಬಂಧ ಇಟ್ಟುಕೊಂಡು ಅಂಥ ಕ್ರಿಯೆಗಳನ್ನು ವೈಜ್ಞಾನಿಕವಾಗಿ ವಿವರಿಸುವುದರೊಂದಿಗೆ ದಲಿತರಿಗೆ ತಿಳುವಳಿಕೆ ನೀಡಬೇಕು. ಗೌಡನಂಥವರು ಚಪ್ಪಲಿಯಲ್ಲಿ ಹೊಡೆದರೆ ಜಾತಿ ಹಿಡಿದು ಅವಮಾನ ಮಾಡಿದರೆ ಅಂಥ ಜಾತಿಯ ಅವಮಾನಕ್ಕೆ ಅವರನ್ನು ಹಿಡಿದು ಅಸ್ಪೃಶ್ಯ ಜಾತಿಗೆ ಸೇರಿಸುವುದೊಂದೇ ಪರಿಹಾರ !

**ಗಂಗಾರಾಂ ಚಂಡಾಳ**

# ದಲಿತ ಪ್ರತಿಭೆ

## ಪ್ರಜ್ಞಾವಂತ ಗಾಯಕ

# ಬಾನಂದೂರು ಕೆಂಪಯ್ಯ



ಭರತಾದ್ರಿ

ದಕ್ಷಿಣ ಭಾರತದ ಸಾಂಸ್ಕೃತಿಕ ಸಂಸ್ಥೆ ಇತ್ತೀಚೆಗೆ ಕರ್ನಾಟಕದ ಇಬ್ಬರು ಕಲಾವಿದರನ್ನು ಗುರುತಿಸಿ ಗೌರವಿಸಿದೆ. ಒಬ್ಬರು ಬಾಳಪ್ಪ ಹುಕ್ಕೇರಿ, ಮತ್ತೊಬ್ಬರು ಬಾನಂದೂರು ಕೆಂಪಯ್ಯ. ಒಬ್ಬರು ವಯೋವೃದ್ಧರು. ಇನ್ನೊಬ್ಬರು ಇನ್ನೂ ಬಿಸಿರಕ್ತದ ತರುಣ. ಕೆಂಪಯ್ಯನವರದು ಅವರ ವಿರೋಧಿಗಳೂ ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವಂಥ ಅಪೂರ್ವ ಸಾಧನೆ. ಎಪ್ಪತ್ತರ ದಶಕದಲ್ಲಿ ನಾನು ಕಂಡಂತೆಯೇ ಹಸಿದ ಹೊಟ್ಟೆಯಲ್ಲಿ ಬೆಂಗಳೂರಿನ ಬೀದಿ ಬೀದಿಗಳಲ್ಲಿ ನೌಕರಿಗಾಗಿ ಅಲೆಯುತ್ತ, ಇಡೀ ವ್ಯವಸ್ಥೆಯ ಕ್ರೂರ ಮುಖಗಳ ಅನುಭವ ಪಡೆದ ಕೆಂಪಯ್ಯ ಅನ್ಯಾಯಗಳ ವಿರುದ್ಧ ಆಕ್ರೋಶಗೊಳ್ಳುವ ವ್ಯಕ್ತಿ ಕೂಡ. ಹಾಗೆ ನೋಡಿದರೆ ಕೆಂಪಯ್ಯನವರದು ಸಂಕಟಗಳ ಬದುಕು. ಹುಟ್ಟಿದ್ದು ಜೀತದಾಳುಗಳಾಗಿ ಸವೆದು ಹೋಗುತ್ತಿದ್ದ ಬಡ ಕುಟುಂಬದಲ್ಲಿ. ಕಲಿತಿದ್ದು ಸೊರಗಿದ ಅಪ್ಪ, ಅಣ್ಣಂದಿರ ಕಂಠದಿಂದ ಹೊಮ್ಮುತ್ತಿದ್ದ ಅಪೂರ್ವ ಜಾನಪದ ಗೀತೆಗಳನ್ನು. ಸ್ವತಃ ಕೆಂಪಯ್ಯ ಕೂಡ ಉಳ್ಳವರ ಮನೆಯೊಂದರಲ್ಲಿ ಜೀತ ಮಾಡಿದ್ದುಂಟು. ಅಲ್ಪ ಸ್ವಲ್ಪ ಮಾರ್ಗದರ್ಶನ ಸಿಗದೆ, ಕುತ್ತಿಗೆಯ ಮೇಲೆ ಕೂತು ದುಡಿಸುವವರೇ ಹೆಚ್ಚಾಗಿದ್ದ ಪರಿಸರದಲ್ಲಿ ಕೆಂಪಯ್ಯನವರ ಸರ್ವಸ್ವವಾಗಿದ್ದುದು ಮೇಲೇರಬೇಕೆಂಬ ಛಲ ಮಾತ್ರ. ಈ ಪ್ರಯತ್ನ ಅವರಿಗೊಂದು ದುಸ್ವಪ್ನ. ವ್ಯವಸ್ಥೆಯ ಆಳದಾಳದಲ್ಲಿ ಇರುವುದು ಕೇವಲ ಕ್ರೌರ್ಯ ಹಾಗೂ ಸ್ವಾರ್ಥ ಎಂಬುದನ್ನು ಅರಿತ ಅವರಿಗೆ ಈ ನೋವಿನ ಅಭಿವ್ಯಕ್ತಿ ಮಾಧ್ಯಮವಾಗಿ ಕಂಡದ್ದು ಜನಪದ ಗೀತೆಗಳ ಗಾಯನ ಮಾತ್ರ. ಎಲ್ಲ ನೋವನ್ನೂ ಮರೆಸುವ ಗಾನ ಮಾಧುರ್ಯದಲ್ಲಿ ಅವರು ತಮ್ಮನ್ನು ಲೀನವಾಗಿಸಿಕೊಂಡರು. ಈ ತಾದಾತ್ಮ್ಯ ಭಾವ, ತೀವ್ರ ತಲ್ಲೀನತೆ, ಅಪೂರ್ವ ನಾದಶ್ರೀ ಕೆಂಪಯ್ಯನವರನ್ನು ರಾಷ್ಟ್ರಮಟ್ಟದ ಗಾಯಕನನ್ನಾಗಿ ಬೆಳೆಸಿದವು. ಕೆಂಪಯ್ಯ ಕೇವಲ ಗಾಯಕ ಮಾತ್ರ ಆಗಿರಲಿಚ್ಛಿಸದೆ ಚಿಂತನೆಯಲ್ಲೂ ತಮ್ಮನ್ನು ತೊಡಗಿಸಿಕೊಳ್ಳಲೆತ್ನಿಸಿದ್ದು ಅವರನ್ನು ವಿಭಿನ್ನ ನೆಲೆಯಲ್ಲಿ ಕಂಡುಕೊಳ್ಳಲು ಸಾಧ್ಯವಾಗಿದೆ. ಇಂಗ್ಲಿಷ್ ಸಾಹಿತ್ಯದ ಆನರ್ಸ್ ಪದವೀಧರರಾದ ಅವರಿಗೆ ಜನಪದ ಸಾಹಿತ್ಯದ ಜೊತೆಗೆ ಜನಪದರ ಬದುಕು ದುಸ್ತರಗೊಂಡಿದ್ದು ಹೇಗೆ ಎಂಬುದರ ಅರಿವು ಇದೆ. ಅದರ ನಿರ್ಮೂಲನಕ್ಕೆ ಹೋರಾಟ ಮಾಡುವ ಕಾಳಜಿಯೂ ಇದೆ.

'ಪಂಚಮ'ದ ಪರವಾಗಿ ಕೆಂಪಯ್ಯನವರನ್ನು ಅಭಿನಂಧಿಸಿದಾಗ ಅವರ ಪ್ರತಿಕ್ರಿಯೆ ಕೊಂಚ ನೋವಿನಿಂದ ಕೂಡಿದ್ದುದೂ ಕಂಡುಬಂದಿತು. ಪ್ರಸ್ತುತ ಮೈಸೂರು ಆಕಾಶವಾಣಿಯಲ್ಲಿ ನೌಕರಿ ಮಾಡುತ್ತಿರುವ ಅವರು ತಮ್ಮ ಪ್ರಶಸ್ತಿಗಿಂತ ಹೆಚ್ಚಾಗಿ ಸಾಮಾಜಿಕ ಏರುಪೇರುಗಳನ್ನೇ ಹೆಚ್ಚಾಗಿ ಹಚ್ಚಿಕೊಂಡಿರುವಂತೆ ತೋರಿತು.

**ಪ್ರಶ್ನೆ :** ನಿಮ್ಮ ಪ್ರಶಸ್ತಿಗೆ ಅಭಿನಂದನೆಗಳು. ನೀವು ದಲಿತ ಕುಟುಂಬದಲ್ಲಿ ಹುಟ್ಟಿ ಬೆಳೆದವರು. ಎಂದಾದರೂ ನಿಮಗೆ ಇಷ್ಟೆಲ್ಲ ಕೀರ್ತಿ ಗಳಿಸುತ್ತೇನೆಂದು ಅನ್ನಿಸಿತ್ತೆ?

**ಉತ್ತರ :** ಅನ್ನಿಸಿರಲಿಲ್ಲ. ಶೋಷಣೆಗಳಿಗೊಳಗಾದ ನನಗೆ ಆಸೆಗಳೇ ಇರಲಿಲ್ಲ. ಬಹುಶಃ ನನ್ನ ಅವಿರತ ಸಾಧನೆಗೆ ಈಗ ಬೆಲೆ ಬಂದಿದೆ. ಸವಾಲುಗಳನ್ನು ಸ್ವೀಕರಿಸುವ ಛಲ ಮಾತ್ರ ನನ್ನಲ್ಲಿತ್ತು. ಇದಕ್ಕೆ ಬಹುತೇಕ ಕಾರಣ ಸೆಂಟ್ರಲ್ ಕಾಲೇಜಿನ ನನ ಬ್ರಾಹ್ಮಣ ಸಹಪಾಠಿಗಳು. ಅವರು ಮರ್ಮಕೆ ಚುಚ್ಚಿ ಹೀಯಾಳಿಸುತ್ತಿದ್ದಂತೆ ನನ್ನ ಬೆಳೆಯಬೇಕೆಂಬ ಛಲ ಮತ್ತಷ್ಟು ಗಟ್ಟಿಯಾಯಿತು.

**ಪ್ರಶ್ನೆ :** 'ನಿಮ್ಮ' ಅಭಿವ್ಯಕ್ತಿಗೆ ಜನಪದ ಗೀತೆಗಳನ್ನೇ ಏಕೆ ಆರಿಸಿಕೊಂಡಿರಿ?

**ಉತ್ತರ:** ಸುಲಭವಾಗಿ ಎಲ್ಲರಿಗೂ ಅರ್ಥವಾಗುತ್ತೆ ಅಂತ. ನಾನು ಹೆಚ್ಚಾಗಿ ಕಲಿತದ್ದೂ ಇದನ್ನೇ ಹುಟ್ಟಿನಲ್ಲಿ ಹೊಲೆಯನಾದ್ದರಿಂದ ಬೇರೆ ಕಲಾ ಮಾಧ್ಯಮವನ್ನು ಅಭಿವ್ಯಕ್ತಿಗೆ ದುಡಿಸಿಕೊಳ್ಳಲು ಸಾಧ್ಯವಾಗಿರಲಿಲ್ಲ ಕೂಡ.

**ಪ್ರಶ್ನೆ :** ನೀವು ಸಮಾಜದ ಶೋಷಣೆಗೆ ಒಳಗಾದವರು. ಸಾಕಷ್ಟು ಮೂಢನಂಬಿಕೆಗಳನ್ನೇ ಬಿತ್ತುವ ಜನಪದ ಗೀತೆಗಳನ್ನು ಮಾರ್ಪಡಿಸಬೇಕೆಂದು ಅನಿಸುವುದಿಲ್ಲವೇ?

**ಉತ್ತರ :** ಅನ್ನಿಸುತ್ತೆ. ನಾನು ಹಾಡುವುದು ಕೇವಲ 'ಸೀರಿಯಸ್' ಆದ ಸಾಕಷ್ಟು 'ಸೆನ್ಸಿಬಲ್' ಆದ ಗೀತೆಗಳನ್ನೇ. ಉದಾಹರಣೆಗೆ ತತ್ವಪದಗಳು, ದುರಂತ ಗೀತೆಗಳು, ದೇವರಿಗೆ ಸಂಬಂಧ ಪಟ್ಟವನ್ನು ನಾನು ಹಾಡುವುದೇ ಕಡಿಮೆ. 'ಪ್ರೇಮ' ಕೂಡ ನನ್ನ ಮೆಚ್ಚಿನ ವಸ್ತು.

**ಪ್ರಶ್ನೆ :** ನಿಮಗೆ ಇನ್ನೂ ಬೆಳೆಯಬೇಕೆನ್ನಿಸುತ್ತದೆಯೆ?

**ಉತ್ತರ :** ಹೌದು. ಇದರ ಮೂಲಕ ಜನರ ಆಳವನ್ನು ತಲುಪಬೇಕೆಂಬ ಆಕಾಂಕ್ಷೆ ಇದೆ. ತೀವ್ರ ನೋವನ್ನು ಜನಪದ ಗೀತೆ ಹೊತ್ತಿರುವುದರಿಂದ ಶಾಸ್ತ್ರೀಯ ಸಂಗೀತ ಎಲ್ಲ ಮಾಧ್ಯಮಗಳಲ್ಲೂ ತಾನೇ ಮೆರೆದು ಜನಪದ ಗೀತೆಯನ್ನು ತುಳಿಯುತ್ತಿರುವುದರಿಂದ—ಜನಪದ ಗೀತೆಗಳಿಗೆ ಒಂದು ವಿಶಿಷ್ಟ ಸ್ಥಾನ ಒದಗಿಸಬೇಕೆಂಬ ಛಲ ಇದೆ.

ಬಾನಂದೂರು ಕೆಂಪಯ್ಯ ಅವರು ಅಂದುಕೊಂಡಂತೆ ಬೆಳೆಯ ಬಲ್ಲರು ಎಂಬುದರಲ್ಲಿ ಸಂದೇಹವಿಲ್ಲ. ಆಕಸ್ಮಾತ್ ಅವರು ಸೋತರೆ ಈ ಸಮಾಜದ ಆರೋಗ್ಯಕ್ಕೆ ಶ್ರಮಿಸಿದ ಅಸಂಖ್ಯಾತರ ಪಟ್ಟಿಗೆ ಅವರೂ ಸೇರಿಹೋಗುತ್ತಾರೆ, ತಮ್ಮ ನಾದ ಮಾಧುರ್ಯದ ನೆನಪಿನೊಂದಿಗೆ. ಇಂಥ ಅಪೂರ್ವ ಗಾಯಕನನ್ನು ತಿರುವನಂತಪುರದ ಸಾಂಸ್ಕೃತಿಕ ಸಂಸ್ಥೆ ಗುರುತಿಸಿದೆ; ಆದರೆ ನಮ್ಮ ರಾಜ್ಯದ ಅಕಾಡೆಮಿಗಳು ಇಂಥ ಗಾಯಕ ಇಲ್ಲವೇ ಇಲ್ಲ ಎಂಬಂತೆ ಜಾತಿ ರಾಜಕೀಯ ಮಾಡುತ್ತ ಅಸಹ್ಯ ಹುಟ್ಟಿಸುತ್ತಿವೆ.

# ರೈತನಿಗೆ ಆಕಾಶ ತೋರಿಸಿ ನಗುವ ಭೂಸುಧಾರಣೆ

## ಉಳುವವನೇ ಭೂ ಒಡೆಯ?

ಕ್ಷೀರಸಾಗರ

ಕರ್ನಾಟಕ ಸರ್ಕಾರ ಜಾರಿಯಲ್ಲಿ ತಂದಿರುವ ಭೂಸುಧಾರಣಾ ಕಾನೂನು ಜನಸಾಮಾನ್ಯರಿಗೆ ಒಂದು ಪ್ರಗತಿ ಪರವಾದ, ಹೆಚ್ಚಿನ ಬದಲಾವಣೆಯನ್ನು ತರುವ ಕಾನೂನಾಗಿ ಕಂಡು ಬಂದಲ್ಲಿ ಆಶ್ಚರ್ಯವೇನಿಲ್ಲ. ಯಾಕೆಂದರೆ ಸರ್ಕಾರ ತನ್ನ ಪ್ರಚಾರ ಕಲೆಯಲ್ಲಿ ಈ ಬಗ್ಗೆ ಸಾಕಷ್ಟು ಮನರಂಜಿತವಾಗಿ ಒಂದು ಪ್ರಗತಿಪರ ಹೆಜ್ಜೆಯಾಗಿ ಇದನ್ನು ವರ್ಣಿಸಿದೆ. ಈ ಸಮಸ್ಯೆಯ ಒಳಹೊಕ್ಕು ನೋಡಿದಾಗ ಸರ್ಕಾರದ ಪ್ರಯತ್ನ ಎಷ್ಟು ಪ್ರಾಮಾಣಿಕವಾದದ್ದು; ಉಳುವವನೇ ನಿಜವಾದ ಭೂಮಿಯ ಒಡೆಯನಾಗಿದ್ದಾನ; ಹಳ್ಳಿಗಳ ಕಡೆ ತೀವ್ರವಾಗಿರುವ ಭೂಮಿಯ ಒಡೆತನದ ಅಸಮಾನತೆಯನ್ನು ನೀಗಿದೆಯ ಅನ್ನುವ ಅನುಮಾನಗಳಿಗೆಲ್ಲ ಉತ್ತರ ಸಿಗುತ್ತದೆ.

**ಭೂ ಸುಧಾರಣೆ ಮತ್ತು ನಿಧಾನ ನೀತಿ :**

ಕರ್ನಾಟಕ ಭೂ ಸುಧಾರಣೆಯ ಬಗ್ಗೆ 1957 ರಲ್ಲಿ ಡತ್ತಿ ಕಮಿಟಿ ಒಂದು ರಿಪೋರ್ಟನ್ನು ಸಿದ್ಧಪಡಿಸಿ 1958 ರಲ್ಲಿ ನ್ಯಾಯಾಂಗದ ಮುಂದಿಟ್ಟಿತು. ಜಾಯಿಂಟ್ ಸೆಲೆಕ್ಟ್ ಕಮಿಟಿಯು 1961 ರಲ್ಲಿ ಅದನ್ನು ಒಪ್ಪಿಕೊಂಡಿತು. 1992 ರಲ್ಲಿ ರಾಷ್ಟ್ರಪತಿಯವರ ಅಪ್ಪಣೆ ಪಡೆದು ಕಾನೂನಾಯಿತು. ಆದರೆ ಇದನ್ನು ಕಾರ್ಯಾಚರಣೆಯಲ್ಲಿ ಜಾರಿ ಮಾಡಿದ್ದು ಮಾತ್ರ 3ನೇ ತಾರೀಖು ಅಕ್ಟೋಬರ್ 1965 ರಲ್ಲಿ.

ಇಷ್ಟೊಂದು ವಿಳಂಬವಾಗಿ ಜಾರಿಗೆ ಬಂದ ಭೂಸುಧಾರಣಾ ಕಾನೂನು ಮುಖ್ಯವಾಗಿ ಇಟ್ಟುಕೊಂಡಿದ್ದ ಉದ್ದೇಶಗಳು.

1. ಗೇಣಿದಾರನಿಗೆ ಭೂಮಿಯ ಒಡೆತನ
2. ಭೂ ಹಿಡುವಳಿಗಳ ಮೇಲೆ ಮಿತಿ ತರುವುದು.
3. ಭೋಗ್ಯ ಮತ್ತು ಗುತ್ತಿಗೆಗಳ ಮೇಲೆ ಹಿಡಿತ ತರುವುದು.
4. ಹೆಚ್ಚುವರಿ ಭೂಮಿಯನ್ನು ಹಂಚುವುದು.
5. ಭೂಮಿಯನ್ನು ಕೊಂಡುಕೊಳ್ಳುವುದರ ಬಗ್ಗೆ ಮತ್ತು ಮಾರುವುದರ ಬಗ್ಗೆ ನಿಬಂಧನೆಗಳನ್ನು ಹೇರುವುದು.

ಇದರೊಟ್ಟಿಗೆ ಆಹಾರ ಧಾನ್ಯಗಳ ಉತ್ಪತ್ತಿಯನ್ನು ಹೆಚ್ಚಿಸುವುದು, ಹಾಗೂ ವ್ಯವಸಾಯ ಕ್ಷೇತ್ರದಲ್ಲಿರುವ ಶೋಷಣೆಯನ್ನು ಸಾಮಾಜಿಕ ಅಸಮಾನತೆಯನ್ನು ಹೋಗಲಾಡಿಸುವುದು ಅನ್ನುವ ಉದ್ದೇಶವನ್ನು ಇಟ್ಟುಕೊಂಡಿತ್ತು.

ಆದರೆ ಸರ್ಕಾರದ ವಿಳಂಬ ನೀತಿಯಿಂದಾಗಿ ಈ ಎಲ್ಲ ಉದ್ದೇಶಗಳಿಗೆ ಪೆಟ್ಟು ಬಿದ್ದಿತು. ಆಳುವ ಸರ್ಕಾರ ಬೇಕೆಂತಲೇ ಈ ವಿಳಂಬ ನೀತಿಯನ್ನು ಕಾಪಾಡಿಕೊಂಡು ಬಂದಿತೇನೋ ಅನ್ನುವ ಅನುಮಾನಗಳು ಹುಟ್ಟುತ್ತವೆ. 8 ವರ್ಷಗಳ ಈ ಅವಧಿ ಜಮೀನ್ದಾರನಿಗೆ ಒಂದು ವರದಾನವಾಯಿತ. ಯಾಕೆಂದರೆ ಈ ಅವಧಿಯಲ್ಲಿ ಅವನು ಗೇಣಿದಾರನನ್ನು ಒಕ್ಕಲೆಬ್ಬಿಸಿದ. ಒಂದೆಡೆ, ಉಳುವವನಿಗೆ ಭೂಮಿ ಅನ್ನುವ ಕಾನೂನು ಇದಾದ್ದರಿಂದ ಗೇಣಿದಾರ ಭೂಮಿಯ ಒಡೆತನ ಪಡೆಯುವ ಸಿಹಿ ಕನಸು ಕಂಡ. ಇನ್ನೊಂದೆಡೆ ಈ ಕಾನೂನಿನ ಬಗ್ಗೆ ಎಚ್ಚರಿಕೆ ವಹಿಸಿದ ಜಮೀನ್ದಾರ ಗೇಣಿದಾರರನ್ನು ಒಕ್ಕಲೆಬ್ಬಿಸಿ ಅವನನ್ನು ಬರಿಗೈಮಾಡಿ ಬೀದಿಗೆ ದಬ್ಬುವುದರಲ್ಲಿ ನಿರತನಾದ. ತಾನು ಉತ್ತು ಬಿತ್ತು ಶ್ರಮ ಹಾಕಿ ಒಂದು ರೀತಿಯಲ್ಲಿ ಮಾನಸಿಕವಾಗಿಯೂ ಸಂಬಂಧ ಪಡೆದುಕೊಂಡಿದ್ದ ಈ ನೆಲದಿಂದ ಅವನು ಹೊರದೂಡಲ್ಪಟ್ಟಾಗ ಅವನಿಗೆ ಆಕಾಶ ಒಂದೇ ಗೇಣಿದೆ ಅಂತ ಆಸೆ ತುಂಬಿದ ಕಾನೂನು ಆಕಾಶವೇ ಅವನ ತಲೆಯ ಮೇಲೆ ಕಳಚಿಕೊಂಡು ಬೀಳುವಂತೆ ಮಾಡಿತು. ಹೀಗೆ ಈ ಅವಧಿಯಲ್ಲಿ ಬಹಳಷ್ಟು ಜನ ತಮ್ಮ ತುತ್ತಿನ ಊಟದ ನೆಲದಾಸರೆ ಕಳೆದುಕೊಂಡು ಭೂ ಹೀನರಾದರು.

ಗೇಣಿದಾರರನ್ನು ಖಾಯಂಗೊಳಿಸುತ್ತೇವೆ. ಅಂತ ಹೇಳಿದ ಕಾನೂನು, ಸ್ವಂತ ವ್ಯವಸಾಯ ಮಾಡುತ್ತೇವೆ ಅಂತ ಹೇಳಿ ಗೇಣಿದಾರರನ್ನು ಕಿತ್ತು ಹಾಕುವುದಕ್ಕೂ ಅನುವು ಮಾಡಿತು. ಒಕ್ಕಲೆಬ್ಬಿಸುವುದರ ವಿರುದ್ಧ ಯಾವುದೇ ಕಾನೂನಿನ ರಕ್ಷಣೆಯೂ ಗೇಣಿದಾರರಿಗೆ ಸಿಕ್ಕಲಿಲ್ಲ.

ಭೂ ಹಿಡುವಳಿಯ ಮೇಲೆ ಮಿತಿ ತಂದರೂ ಬಹಳ ಮಂದಿ ಹೆಚ್ಚುವರಿ ಭೂಮಿ ಇಟ್ಟುಕೊಳ್ಳಲು ಸಾಧ್ಯವಾದದ್ದು ಕೂಡ ಈ ವಿಳಂಬ ನೀತಿಯಿಂದಾಗಿ ಕಾನೂನು ಕ್ರಿಯೆಗೆ ಇಳಿಯುವುದಕ್ಕೆ ಮುಂಚೆಯೇ ಅವರಿವರ ಹೆಸರಿನಲ್ಲಿ ಭೂಮಿಯನ್ನ ವರ್ಗಾಯಿಸಿ ತಮ್ಮ ಹಿಡಿತದಲ್ಲೇ ಇಟ್ಟುಕೊಂಡರು. ಹೀಗಾಗಿ ಭೂ ನ್ಯಾಯ ಮಂಡಲಿಗಳ ಮೂಲಕ ಸಿಕ್ಕಿದ ಹೆಚ್ಚುವರಿ ಭೂಮಿ 1981ರ ಹೊತ್ತಿಗೆ ಕೇವಲ 1,76,470 ಎಕರೆಗಳು ಮಾತ್ರ. ಕರ್ನಾಟಕದಲ್ಲಿ ಎರಡೂವರೆ ಕೋಟಿ ಎಕರೆಗಿಂತ ಹೆಚ್ಚಿನ ವ್ಯವಸಾಯದ ಭೂಮಿ ಇದ್ದು, ಬಂದ ಹೆಚ್ಚುವರಿ ಭೂಮಿ ಇಷ್ಟು ಮಾತ್ರ ಅಂದಾಗ ಒಳಗೇ ಬಂದೋಬಸ್ತು ಮಾಡಿಕೊಳ್ಳುವ ಕೆಲಸ ಎಷ್ಟು ನಡೆದಿದೆ ಎಂದು ಲೆಕ್ಕ ಹಾಕಬಹುದು.

ಇಲ್ಲಿ ನಾವು ಗಮನಿಸಬೇಕಾಗಿರುವ ಇನ್ನೊಂದು ಮುಖ್ಯ ಅಂಶವೆಂದರೆ. ಆಗ ಆಡಳಿತದಲ್ಲಿ ಬಹುಸಂಖ್ಯಾತರಾಗಿದ್ದ ಜಾತಿಗಳು ಮತ್ತು ಅವರ ಹಿತಾಸಕ್ತಿಗಳು. ಆಗ ಆಡಳಿತದಲ್ಲಿ ಬಹು ಸಂಖ್ಯಾತರಾಗಿದ್ದ ಶಾಸಕರು ಒಕ್ಕಲಿಗರು ಮತ್ತು ಲಿಂಗಾಯಿತರು. ಭೂ ಒಡೆತನವನ್ನು ಪಡೆದಿದ್ದವರೆಂದರೆ ಬ್ರಾಹ್ಮಣರು, ಒಕ್ಕಲಿಗರು ಮತ್ತು ಲಿಂಗಾಯಿತರು. ಇವರಲ್ಲಿ ಕೆಲವರು ತಮ್ಮ ಜಮೀನನ್ನು ಅಲ್ಪಸಂಖ್ಯಾತರಿಗೆ ಮತ್ತು ಹರಿಜನರಿಗೆ ಗೇಣಿಗಾಗಿ ಕೊಟ್ಟಿದ್ದರು. ಇವರು ಹಳ್ಳಿಗಳಲ್ಲಿ ಯಾವುದೇ ರಾಜಕೀಯ ಮತ್ತು ಸಾಮಾಜಿಕ ಪ್ರಾಬಲ್ಯವನ್ನು ಸ್ಥಾಪಿಸಿಲ್ಲದೆ ಇದ್ದುದರಿಂದ ಅವರನ್ನು ಒಕ್ಕಲೆಬ್ಬಿಸಿ ತಮ್ಮ ಭೂಮಿಯನ್ನು ವಾಪಸ್ಸು ಪಡೆದುಕೊಳ್ಳುವುದು ಒಕ್ಕಲಿಗರಿಗೆ ಮತ್ತು ಲಿಂಗಾಯಿತರಿಗೆ ಅಷ್ಟೇನೂ ಕಷ್ಟದ ಕೆಲಸವಾಗಲಿಲ್ಲ. ಬ್ರಾಹ್ಮಣರು (ಮಲೆನಾಡು ಬಿಟ್ಟು) ತಮ್ಮ ವೃತ್ತಿಯನ್ನು ವ್ಯವಸಾಯವಾಗಿಟ್ಟುಕೊಳ್ಳದೆ ಪಟ್ಟಣಗಳಲ್ಲಿ ಕಾರಕೂನರಾಗಿಯೋ ಅಧಿಕಾರಶಾಹಿಗಳೋ ಆದದ್ದರಿಂದ absantee land lord ಗಳಾಗಿದ್ದರಿಂದ ತಮ್ಮ ಜಮೀನನ್ನು ಉಳಿಸಿಕೊಳ್ಳಲಾಗಲಿಲ್ಲ. ಈ ಜಮೀನೆಲ್ಲ ಗೇಣಿದಾರರಾಗಿದ್ದ ಒಕ್ಕಲಿಗರಿಗೆ ಮತ್ತು ಲಿಂಗಾಯಿತರಿಗೆ ಸೇರಿತು. ಹೀಗೆ ಭೂ ಸುಧಾರಣಾ ಕಾಯಿದೆಯಿಂದ ಅನುಕೂಲ ಪಡೆದು ಕೊಂಡವರು ಇವರಾದರೆ ಭೂಮಿ ಕಳೆದುಕೊಂಡವರು ಹರಿಜನರು, ಅಲ್ಪ ಸಂಖ್ಯಾತರು ಮತ್ತು ಬ್ರಾಹ್ಮಣರು ಎಂದು ಡಾ. ತಿಮ್ಮಯ್ಯ ಮತ್ತು ಅಜೀಜ್ ಅವರು ಮಾಡಿರುವ ವಿಶ್ಲೇಷಣೆ ಸರಿ ಎನಿಸುತ್ತದೆ. •

# ಎಕ್ಕಡದ ಏಟು ಮನ್ನ ಚಾವಟಿ ಏಟಿಗೆ ದಂಡ!

ಆರ್. ಆರ್. ಶಿವರಾಮು

ಆರ್. ರಾಜು

ಹರಳಹಳ್ಳಿ, ಪಿರಿಯಾಪಟ್ಟಣ ತಾಲ್ಲೂಕಿನ ಒಂದು ಗ್ರಾಮ. ಈ ಗ್ರಾಮದಲ್ಲಿ ಸುಮಾರು ೨೦೦ ಒಕ್ಕಲು ಲಿಂಗಾಯಿತ ಮನೆಗಳಿವೆ. ಮತ್ತು ೨೦ ಒಕ್ಕಲು ಹರಿಜನರ ಮನೆಗಳಿವೆ. ಈ ಗ್ರಾಮದಲ್ಲಿ ಮೇಲ್ಕಂಡ ಸವರ್ಣೀಯರ ಗುಂಪು ದಲಿತ ಹರಿಜನರ ಮೇಲೆ ಪ್ರತಿನಿತ್ಯ ಯಾವುದಾದರೂ ಒಂದು ಸಾಮಾನ್ಯ ವಿಷಯಕ್ಕೇ ಆಗಲಿ ಆಗಿಂದಾಗ್ಗೆ ಹಲ್ಲೆ ದೌರ್ಜನ್ಯ ನಡೆಸುತ್ತಿರುವುದು ಸಾಮಾನ್ಯ ದಿನ ಕರ್ಮವಾಗಿ ಬಿಟ್ಟಿದೆ.

ಇತ್ತೀಚೆಗೆ ದಿನಾಂಕ ೯-೬-೮೨ನೇ ಸೋಮವಾರ ಹರಿಜನರ ಚನ್ನಯ್ಯನ ಕಿರಿಯ ಮಗನಾದ ಮಹದೇವ ಎಂಬ ೧೨ ವರ್ಷದ ಹುಡುಗ ತಮ್ಮ ಆಡುಗಳನ್ನು ಸರ್ಕಾರಿ ಪಾಠಶಾಲೆಯ ಆವರಣದ ಹತ್ತಿರ ಮೇಯಿಸುತ್ತಿರುವಾಗ ಅದೇ ಗ್ರಾಮದ ಶ್ರೀಮಂತ ಸಿದ್ದಣ್ಣಯ್ಯನ ಮಗ ಪ್ರಸಾದ ಎಂಬ ಹುಡುಗ "ನಮ್ಮ ಜಮೀನಿನ ಬೇಲಿಯ ಹತ್ತಿರ ಆಡುಗಳನ್ನು ಮೇಯಿಸುತ್ತಿದ್ದಿಯೇನೋ ಹೊಲೆ ಸೂಳೆಮಗನೆ" ಎಂದು ತನ್ನ ಎಕ್ಕಡದ ಕಾಲಿನಿಂದಲೆ ಸಿಕ್ಕಾಪಟ್ಟೆ ಒಡೆಯುತ್ತಿದ್ದದನ್ನು ಹೊಲದ ಕಡೆಯಿಂದ ಬರುತ್ತಿದ್ದ ಚನ್ನಯ್ಯ ನೋಡಿ ಪ್ರಸಾದನಿಗೆ ತನ್ನ ಕೈಯಲ್ಲಿದ್ದ ಚಾವಟಿಯಿಂದ ೨-೩ ಏಟುಗಳನ್ನು ಹೊಡೆದ. ಇದನ್ನು ತಿಳಿದ ಸವರ್ಣೀಯರು ಅಂದಿನ ರಾತ್ರಿಯೇ ಸಾಮಾನ್ಯ ಮಕ್ಕಳ ಮಾತನ್ನೇ ದೊಡ್ಡ ಅಪರಾಧವೆಂದು ಗುರ್ತಿಸಿ, ಅಲ್ಲಿಯ ಹರಿಜನರನ್ನು ಬೆದರಿಸಿ ನ್ಯಾಯಕ್ಕೆ ಸೇರಿಸಲಾಯಿತು. ಸವರ್ಣೀಯ ಶ್ರೀಮಂತರಲ್ಲಿ ಜಯಪ್ಪಶೆಟ್ಟಿ, ದೊಡ್ಡಬಸಪ್ಪ, ಸಿದ್ದಣ್ಣಯ್ಯ, ರಾಜಣ್ಣ, ಬಸವಣ್ಣ ರಾಮಶೆಟ್ಟರ ಮಲ್ಲಪ್ಪ, ಪರ್ವತಯ್ಯ ರಾಮಶೆಟ್ಟರ ಸೋಮಪ್ಪ, ಶಿವಲಿಂಗಾರಾಧ್ಯ, ಮಲ್ಲಪ್ಪ, ಇನ್ನು ಅನೇಕ ಮಂದಿ ಸೇರಿಕೊಂಡು ಮೋಸದ ನ್ಯಾಯಕ್ಕೆ ಕಳಸಪ್ರಾಯರಾದರು.

ನ್ಯಾಯದಲ್ಲಿ ತಮ್ಮವರಿಂದ ಬಿದ್ದ ಎಕ್ಕಡದ ಏಟನ್ನು ಮನ್ನಾ ಮಾಡಿದರಲ್ಲದೆ ಬಡಹರಿಜನರ ಚಾವಟಿಯ ಏಟು ಮಹಾ ಅಪರಾಧವಾಗಿ ಪರಿಣಮಿಸಿ ನ್ಯಾಯಸ್ಥಾನದಿಂದಲೇ ಹುಡುಗನ ಅಣ್ಣ ಚನ್ನಯ್ಯ, ತಂದೆಯಾದ ಚನ್ನಯ್ಯನನ್ನು ಕುತ್ತಿಗೆ ಪಟ್ಟಿ ಹಿಡಿದೆತ್ತಿ ಕೊಂಡು ನಾಯಿಗೆ ಬಡಿದ ರೀತಿ ಒಡೆದುದಲ್ಲದೆ, ಚಾವಟಿ ಏಟಿಗೆ ೫೦೦ರೂ ದಂಡ ಹಾಕಿದರು. ಈ ದಂಡದ ಹಣವನ್ನು ಇನ್ನು ೧೫ ದಿನಗಳಲ್ಲಿ ಕೊಡದಿದ್ದರೆ, ನಿನ್ನ ಹಸು ಆಡುಗಳನ್ನು ಸಾರ್ವಜನಿಕರ ಮುಂದೆ ಹರಾಜು ಹಾಕುತ್ತೇವೆಂದು ಸವಾಲುಹಾಕಿ ತಮ್ಮ ಶ್ರೀಮಂತಿಕೆಯ ಪಟ್ಟವನ್ನು ಉಳಿಸಿಕೊಂಡಿರುತ್ತಾರೆ.

ಇಂತಹ ವಂಚನೆ ಹಾಗು ಕ್ರೌರ್ಯವನ್ನು ಕಂಡೂ ಕಾಣದಂತಿರುವ ಸರ್ಕಾರ ಒಂದು ಕಡೆ, ಕಂಡೂ ಅನುಭವಿಸುತ್ತಾ ಕಣ್ಣೀರಿಡುತ್ತಿರುವ ದಲಿತ ಜನತೆ ಮತ್ತೊಂದು ಕಡೆ! ಇದಕ್ಕೇನು ಕೊನೆ ಇಲ್ಲವೆ ?

.... .... ... .... .... .... ....

## "ಎಲ್ಲಿಹನೋ ನಿಮ್ಮ ಅಂಬೇಡ್ಕರ್?"

ನಮ್ಮದು ದಿವ್ಯ ಸಂಸ್ಕೃತಿ, ಭವ್ಯ ಪರಂಪರೆ ಹೊಂದಿದ ಜಾತ್ಯಾತೀತ ರಾಷ್ಟ್ರ, ನಾವೆಲ್ಲರೂ ಒಂದೇ ತಾಯಿಯ ಮಕ್ಕಳು—ಎಂದು ಈ ದೇಶದ ರಾಜಕಾರಣಿಗಳು, ಹಿರಿಯ ಅಧಿಕಾರಿಗಳು ಸಭೆ ಸಮಾರಂಭಗಳಲ್ಲಿ, ರೇಡಿಯೋ ಟಿ. ವಿ. ಗಳಲ್ಲಿ ಗಂಟಲು ಉಬ್ಬಿ ಹರಿಯುವ ತನಕ ಭಾಷಣ ಬಿಗಿದರೂ, ವಾಸ್ತವದಲ್ಲಿ ಇದರ ವ್ಯತಿರಿಕ್ತವನ್ನೆ ನಾವು ಭಾರತದ ಮೂಲೆ ಮೂಲೆಯಲ್ಲಿ ಕಾಣುತ್ತಿದ್ದೇವೆ.

ಜೂನ್ 12 ರಂದು ಗುಲಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕಿನ ಪಶ್ಚಿಮಕ್ಕೆ ಮಹಾರಾಷ್ಟ್ರದ ಸಮೀಪ ಇರುವ ಕೆರೂರ ಎಂಬ ಹಳ್ಳಿಯ ಚಿಕ್ಕ ದಲಿತ ಮಕ್ಕಳು ದನ ಕಾಯಲು ಅಡವಿಗೆ ಹೋದಾಗ ಊಟ ಮಾಡಿ ನೀರು ಕುಡಿಯಲು ನೆರೆ ಹಳ್ಳಿಯಾದ ಖಿರೂರಿನ ದಳಪತಿ ಲಿಂಗಾಯ್ತ ಚಂದ್ರಣ್ಣನ ಬಾವಿಗೆ ಹೋದರು. ಬಾವಿ ಹತ್ತಿರ ಕೆಲಸ ಮಾಡುತ್ತಿದ್ದ ದಳಪತಿಯ ತಮ್ಮ ಸಿದ್ರಾಮ, ಇವರ ಚೇಲಾ ಗೌಡಪ್ಪ, ಮತ್ತವರ ಗುಂಪಿನವರಿದ್ದುದನ್ನು ಕಂಡು ಮಕ್ಕಳು ಕುಡಿಯಲು ನೀರು ನೀಡಿರೆಂದು ಕೇಳಿದಾಗ ಆ ಮುಗ್ಧ ಮಕ್ಕಳಿಗೆ "ಬಾವಿಗೆ ಇಳಿದು ಕುಡಿಯಿರಿ" ಎಂದು ವ್ಯಂಗ್ಯವಾಗಿ ಹೇಳಿದರು. ಇವರ ವ್ಯಂಗ್ಯವನ್ನು ಅರ್ಥ ಮಾಡಿಕೊಳ್ಳಲಾಗದ ಮಕ್ಕಳು ಬಾವಿಗಿಳಿದು ನೀರು ಕುಡಿಯಲಾರಂಭಿಸಿದಾಗ ಇದನ್ನು ಸಹಿಸದ ಲಿಂಗಾಯ್ತರು ತಮ್ಮ ಬಾವಿ ಹಾಗೂ ನೀರು ಮೈಲಿಗೆಯಾಯಿತು ಎಂದು ತಿಳಿದು ಬಾವಿಯ ಹಂತಗಳ ಮೇಲಿದ್ದ ಮಕ್ಕಳನ್ನು ಒದ್ದ ರಭಸಕ್ಕೆ ಮಕ್ಕಳ ಕೈಯಲ್ಲಿದ್ದ, ಬಾಯಲ್ಲಿದ್ದ ನೀರು ಕೆಳಕ್ಕೆ ಚೆಲ್ಲಿತು. ಈ ಎಳೆಯ ಕಂದಗಳ ಗೋಳೂ ಸಹ ತಟ್ಟದ ಈ ಕ್ರೂರಿಗಳು ಸುಮ್ಮನಾಗದೆ ಕಲ್ಲು ಮತ್ತು ಬಡಿಗೆಯಿಂದ ಮಕ್ಕಳಿಗೆ ಬಾರಿಸತೊಡಗಿದರು.

ಇಷ್ಟಕ್ಕೆ ತೃಪ್ತಿಯಾಗದೆ ಈ ಸವರ್ಣೀಯರು "ಮಕ್ಕಳ್ ಹೊಲ್ಯಾರ್ಯೆ ನೀವು ಅಂಬೇಡ್ಕರ್ ಜಯಂತಿ ಮಾಡ್ರೋ ಬೋಸಡಿ ಮಕ್ಕಳ್ಯ. ಈಗ ಎಲ್ಲಿಹನಾ ನಿಮ್ಮ ಅಂಬೇಡ್ಕರ್, ಹ್ಯಾಂಗ ಬಿಡಸಗೊಂಡು ಹೋಗತನ ಈಗ ನಮ್ಮ ಕೈಯಾಗಿಂದ ನಿಮಗಳಾ, ಮಕ್ಕಳ ಕೆರ್ ಹೊಲ್ಯಾರಿಗಿ ಸೊಕ್ಕ ಸೊಕ್ಕ ಬಂದಾದ, ನಮ್ಮ ಊರ ಹೊಲ್ಯಾರಿಗೂ ಅಂಬೇಡಕರ ಜಯಂತಿ ಮಾಡಲಕ ಸಾತ್ ಕೊಟ್ತಾರ, ಈ ಮಕ್ಕಳ ಕಾಲ ಕಡಿರಿ" ಇತ್ಯಾದಿ ಅಂದು ಹಾಡಿದರಲ್ಲದೆ, ಈ ಮಕ್ಕಳನ್ನು ತಮ್ಮ ಮನೆ ಕಟ್ಟುವಲ್ಲಿಗೆ ಎಳೆದುಕೊಂಡು ಹೋಗಿ ತೂಕದ ಕಲ್ಲು ಬಂಡೆಗಳನ್ನ ಈ ಮಕ್ಕಳ ತಲೆ ಮೇಲೆ ಹೇರಿ, ಬಂಡೆಯ ಭಾರಕ್ಕೆ ಮಕ್ಕಳು ಥರ ಥರ ನಡುಗುವಾಗ ಗಹಗಹಿಸಿ ನಕ್ಕು "ಮಕ್ಕಳ..... ಹೊಲ್ಸ್ ತಿಂಡ್ ತಿಂದು ಸೊಕ್ಯಾವ, ಇವರಿಗೇನು ಧಾಡಿ, ಹೊರಸ ಇನ್ನೊಂದು ಮ್ಯಾಗ ಕಲ್ಲ" ಎಂದೆಲ್ಲ ಹಿಂಸಿಸಿದ್ದಾರೆ.

ಬಸಣ್ಣ ಸಿಂಗೆ

## ಜಾತಿ ಘೋಷಣೆ: ಬಿಡುಗಡೆಯ ಮೊದಲ ಘಟ್ಟ

(ವರದಿ : ಶಂಕರ್)

ಪ್ರತಿಯೊಬ್ಬ ದಲಿತನೂ ತನ್ನ ಜಾತಿಯನ್ನು ಧೈರ್ಯವಾಗಿ, ಬಹಿರಂಗವಾಗಿ ಘೋಷಿಸಿಕೊಳ್ಳುವುದೇ ದಲಿತ ವಿಮೋಚನೆಯ ಮೊದಲ ಘಟ್ಟ ಎಂದು ಖ್ಯಾತ ಕವಿ ಸಿದ್ದಲಿಂಗಯ್ಯ ಹೇಳಿದ್ದಾರೆ.

ಉತ್ತರ ಕನ್ನಡ ಜಿಲ್ಲೆಯ ಬಂಡಾಯ ಸಾಹಿತ್ಯ ಸಂಘಟನೆಯ ಆಶ್ರಯದಲ್ಲಿ ಇತ್ತೀಚೆಗೆ ಶಿರಸಿಯಲ್ಲಿ ದಲಿತ ಕವಿ ವಿ. ಮುನಿವೆಂಕಟಪ್ಪ ಅವರ "ಕೆಂಡದ ನಡುವೆ" ಕವನ ಸಂಕಲನವನ್ನು ಬಿಡುಗಡೆ ಮಾಡಿ ಮಾತನಾಡುತ್ತಿದ್ದ ಅವರು ಮೂಢನಂಬಿಕೆಗಳನ್ನು ಬಿಟ್ಟು ವೈಜ್ಞಾನಿಕತೆಯನ್ನು ಮೈಗೂಡಿಸಿಕೊಳ್ಳುವ ಮೂಲಕ ಪ್ರತಿಯೊಬ್ಬ ದಲಿತನೂ ತನ್ನ ವಿಮೋಚನೆ ಮಾಡಿಕೊಳ್ಳಬೇಕೆಂದರು.

ಬಂಡಾಯ ಸಾಹಿತಿ ಕಾಳೇಗೌಡ ನಾಗವಾರ ಅವರು ಅಧ್ಯಕ್ಷತೆ ವಹಿಸಿದ್ದರು. ಆರ್. ವಿ. ಭಂಡಾರಿ, ಎ. ಜಿ. ಸಬರದ್, ಜಿ. ಅವಧಾನಿ, ಎ. ಮುನಿವೆಂಕಟಪ್ಪ ಮೊದಲಾದವರು ಸಭೆಯಲ್ಲಿ ಮಾತನಾಡಿದರು. ಮೊದಲು ಶಂಕರ್ ಮತ್ತು ಸಂಗಡಿಗರು ಕ್ರಾಂತಿಗೀತೆ ಹಾಡಿದರು. ಕೊನೆಯಲ್ಲಿ ಶ್ರೀಪಾದ ವಂದಿಸಿದರು.

ನಾ ಕಂಡ ಧಸ್‌ನಾಲಾಗಳು

# ಭೂ ಗರ್ಭದ ಒಳಗೊಂದು ಕರಾಳ ಭಾರತ

ಎಂ. ವೆಂಕಟಸ್ವಾಮಿ

ಭೂಗರ್ಭಶಾಸ್ತ್ರದ ವಿದ್ಯಾರ್ಥಿಯಾದ ಎಂ. ವೆಂಕಟಸ್ವಾಮಿಯವರು ಕೋಲಾರದ ಚಿನ್ನದ ಗಣಿಗಳ ಕರಾಳ ಮುಖಗಳನ್ನು ಕಂಡು ಅನುಭವಿಸಿದವರು. ಮತ್ತು ನೋವಿನ ಅನುಭವಗಳಿಂದಲೇ ಕವಿಯಾದವರು. ಇತ್ತೀಚೆಗೆ ಇವರು ಬಿಹಾರದ ಗಣಿಗಳಿಗೆ ಭೇಟಿಕೊಟ್ಟಾಗ ಕಂಡದ್ದನ್ನು, ಭೂಮಿ ಒಳಗೆ ಬದುಕುವವರ ಕತ್ತಲೆ ಬದುಕನ್ನು ಕಂಡಾಗ ಅನ್ನಿಸಿದ್ದನ್ನು ಇಲ್ಲಿ ಬರೆದಿದ್ದಾರೆ. ಸಹಸ್ರಾರು ಮನುಷ್ಯರನ್ನು ನುಂಗಿದಂಥ ಧಸ್‌ನಾಲಾ ಗಣಿಯ ಭೀಕರತೆಯನ್ನು ಇಲ್ಲಿ ನೆನಪಿಸಿದ್ದಾರೆ.



ಭೂಗರ್ಭಶಾಸ್ತ್ರದ ವಿದ್ಯಾರ್ಥಿಯಾದ ನನಗೆ, ನನ್ನ ಗೆಳೆಯರಿಗೆ ಒಂದು ತಿಂಗಳ ಕಾಲ ಭಾರತ ಭೂಪಟದ ಮೇಲೆ ಹರಿದಾಡಲು ವಿಶ್ವವಿದ್ಯಾನಿಲಯದ ಮುಖಾಂತರ ಅವಕಾಶ ಸಿಕ್ಕಿತು. ಆಗ ನನ್ನ ನೋಟಗಳು ಎರಡು ರೀತಿಯಲ್ಲಿ ಬೆಳೆದಿದ್ದವು. ಒಂದು ಭೂಶಾಸ್ತ್ರದ ಬಗ್ಗೆ. ಇನ್ನೊಂದು ದಲಿತರ ಬಗ್ಗೆ. ಮೊದಲನೆಯದು ಓದುತ್ತಿರುವುದರಿಂದಾದರೆ, ಎರಡನೆಯದು ದಲಿತನಾದುದರಿಂದಲೋ ಅಥವಾ ಸುತ್ತಲು ನಡೆಯುತ್ತಿರುವ ಅನ್ಯಾಯಗಳನ್ನು ನೋಡಿ ಸಹಿಸಲಾರದೆಯೋ ಏನೋ. ನಾನು ನೋಡಿದ ಹತ್ತಾರು ರಾಜ್ಯಗಳಲ್ಲಿ ಕುತೂಹಲ ಹಾಗೂ ಭಯಾನಕವಾಗಿ ಕಂಡ, ಬಿಹಾರಿನ ಅದರಲ್ಲೂ 'ದನ್‌ಬಾದಿನ' ಎರಡು ಮುಖಗಳನ್ನು ಈ ಮೂಲಕ ನಿಮಗೆ ಪರಿಚಯಿಸುತ್ತಿದ್ದೇನೆ.

ಭಾರತದ ಭೂಪಟದಲ್ಲಿ ಅದರುಗಳ ಮದರ್ ಎಂದು ಕರೆಸಿಕೊಂಡಿರುವ ೮೦ ಮೈಲುದ್ದದ ಬಿಹಾರಿನ ರಾಖಾಮೈನ್ಸ್ (Copper) ಮತ್ತು ಯುರೇನಿಯಂ ಮೈನ್ಸ್‌ಗಳನ್ನು ನೋಡಿ ಅಸನ್‌ಸಾಲ್ ಮೇಲೆ, ದನ್‌ಬಾದಿನ ಕಡೇ ಪ್ರಯಾಣ ಬೆಳೆಸಿದ್ದೆವು. ರೈಲಿನಲ್ಲಿ ಕುಳಿತಿದ್ದ ನಮಗೆ, ಅಕ್ಕಪಕ್ಕ ಹಾದು ಹೋಗುತ್ತಿದ್ದಾ ಹೊಲಗದ್ದೆಗಳು, ಕೋಲಾರ ಜಿಲ್ಲೆಯನ್ನು ಜ್ಞಾಪಕಕ್ಕೆ ತರಿಸುವಂತಿತ್ತು. ಬೆಟ್ಟ ಗುಡ್ಡಗಳು ದೂರ ದೂರ ಸಾಗುತ್ತ ಮುಗಿಲುಗಳ ಜೊತೆ ಕಣ್ಣಾ ಮುಚ್ಚಾಲೆ ಆಡುತ್ತಿದ್ದವು. ರೈಲು ಕಿರ್ರನೆ ಕಿರುಚುತ್ತಾ ಒಂದು ಸಣ್ಣ ನಿಲ್ದಾಣದಲ್ಲಿ ನಿಂತಿತು. ಜನರ ಗದ್ದಲ ಜಾಸ್ತಿಯಾಗಿ ಕಿಟಕಿಯಲ್ಲಿ ತಲೆಯಾಕಿದೆ ಆಗಲೇ, ನಮ್ಮ ಪೆಟ್ಟಿ ತುಂಬಿದ್ದು, ಇನ್ನಷ್ಟು ಜನ ಒಳನುಗ್ಗುತ್ತಿದ್ದರು. ಅವರು ಮಾತನಾಡುತ್ತಿದ್ದ ಒಂದು ಪದವೂ ಅರ್ಥವಾಗುವಂತಿರಲಿಲ್ಲ. ಗಿರಿಜನಾಂಗಕ್ಕೆ ಸೇರಿದ ಹೆಂಗಸರು, ಮಕ್ಕಳ- ಒಂದಿಂಡು ಕಯ್ಯೋ....ಕುಯ್ಯೋ....ಎನ್ನುತ್ತಾ ಹತ್ತಿ ಬಂದರು. ಮಕ್ಕಳೆಲ್ಲಾ ಬೆದರಿದ ಬೊಂಬೆಗಳಂತೆ ನಮ್ಮನ್ನೇ ದಿಟ್ಟಿಸುತ್ತಿದ್ದರು.

ಹೆಂಗಸರಿಗೆ ಕಿವಿ ಮೂಗುಗಳೆಲ್ಲಾ ತೂತುಗಳಾಗಿದ್ದವು. ಬರಿ ಮೈಯಲ್ಲಿದ್ದ ಕರ್ರಗಿನ ಕೂಸೊಂದನ್ನು ಕಂಕಳಲ್ಲಿ ತಬ್ಬಿಕೊಂಡಿದ್ದ ಹೆಂಗಸೊಬ್ಬಳು, ಯಾರ ಪರಿವೆಯೂ ಇಲ್ಲದೇ ತನ್ನ ಮೊಲೆಯನ್ನು ಮಗುವಿನ ಬಾಯಲ್ಲಿಟ್ಟು ಅದೇನೋ ಗೊಣಗುತ್ತಿದ್ದಳು. ಮಕ್ಕಳ ಹಿಂದು ಹಾದು ಹೋಗುತ್ತಿದ್ದ ಬೆಟ್ಟ ಗುಡ್ಡಗಳನ್ನ ನೋಡಿ ಏನೇನೋ ಹೇಳಿಕೊಳ್ಳುತ್ತಿದ್ದವು. ಇವರನ್ನೆಲ್ಲಾ ನೋಡುತ್ತಿದ್ದ ನನಗೆ ಸ್ವಾತಂತ್ರ್ಯ ಬಂದು ೩೫ ವರ್ಷಗಳಾದುವೇ ? ........ಎನಿಸಿತು.

ಬೆಳಿಗ್ಗೆ ನಮ್ಮ ಗೆಳೆಯರೆಲ್ಲಾ ಧನ್‌ಬಾದ್ ನಗರದಲ್ಲಿ ಚೆಲ್ಲಾಪಿಲ್ಲಿಯಾಗಿದ್ದರು. ಹಾಸ್ಟೆಲ್‌ನಲ್ಲಿಳಿದುಕೊಂಡಿದ್ದ ನಾನು ಮತ್ತು ನನ್ನ ಗೆಳೆಯರಿಬ್ಬರು ಸಿಟಿ ಸುತ್ತುವ ಬಯಕೆಯಿಂದ ಹೊರಟಾಗ, ರೋಡಿನುದ್ದಕ್ಕೂ ಅಕ್ಕಪಕ್ಕದಲ್ಲೆಲ್ಲಾ, ಅರಕು–ಮುರಕು ತೇಪೆಗಳಾಕಿ ಜೋಡಿಸಿದ ಜೋಪಡಿಗಳು, ಮರದಲಿಗೆ, ತಗಡಿನ ಡಬ್ಬಗಳಲ್ಲಿ ಕೂತಿದ್ದ ಚಿಲ್ಲರೆ ವ್ಯಾಪಾರಿಗಳು, ದೈತ್ಯಾಕಾರದ ಲಾರಿಗಳು ತಮ್ಮ ಕರ್ಕಶ

ವಿಶೇಷ ಲೇಖನ

ಶಬ್ದದೊಡನೆ ಸಾಲುಗಟ್ಟಿ ಸಾಗಿದ್ದವು. ಇವುಗಳ, ಮಧ್ಯೆ ಸಿಕ್ಕ ಅಲ್ಪ ಸ್ವಲ್ಪ ಜಾಗದಲ್ಲೇ ಕುಯ್ಯುಗುಡುತ್ತಿದ್ದ ಡೀಸಲ್, ಪೆಟ್ರೋಲಿನ ರಿಕ್ಷಾ–ಕಾರುಗಳ ಪೈಪೋಟಿಗೆದುರಿ, ಏದುರಿಸು ಬಿಡುತ್ತಾ ತುಳಿದು, ತುಳಿದು ಸವೆದ ಕುಂಡಿಗಳ, ಗಳಗಳ ಅಸ್ಥಿಪಂಜರಗಳನ್ನೊಂದಿದ್ದ ಸೈಕಲ್ ರಿಕ್ಷಾಗಳು ಅಲ್ಲಲ್ಲೇ ಹರಿದಾಡುತ್ತಿದ್ದವು. ಪ್ರಜಾಪ್ರಭುತ್ವದ ಈ ದೇಶದಲ್ಲಿ ಮನುಷ್ಯನೊಬ್ಬನನ್ನು, ಮನುಷ್ಯನೊಬ ಎತ್ತಿನಂತೆ ಎಳೆದು ಸಾಗುವ ಚಿತ್ರ ನೋಡಿ ತಲೆ ಮೆಲ್ಲಾಗುವಂತಿತ್ತು.

ರೈಲು ನಿಲ್ದಾಣದ ಪಕ್ಕದಲ್ಲಿ ದನಗಳನ್ನು ಕಸಯಿಗೆ ಹೊಡೆಯುವಂತೆ ಮೊರಘು ಮೀಸೆಗ ಇಬ್ಬರು ದಢೂತಿ ಪೋಲೀಸರು ಕೆದರಿದ ಕೂದಲಿ ಕೊಳಕು ಬಟ್ಟೆಗಳ ಏಳು ಜನ ಯುವಕರ ನಡುಗಳಿ ಮತ್ತು ಹಿಂದಕ್ಕೆ ತಿರುಗಿಸಿದ ಕೈಗಳಿಗೆ ಬಲವಾದ ಹಗ್ಗವನ್ನು ಬಿಗಿದು, ರೂಲ್ ದೊಣ್ಣೆಗಳಿಂದ ತಿವಿಯುತ್ತಾ ಅಟ್ಟುತ್ತಿದ್ದರು. ತಿವಿತದಿಂದ ಕುಂಟನೊಬ್ಬ ಹಿಂದಕ್ಕೆ ತಿರುಗಿ ಕೆಕ್ಕರಿಸುತ್ತಿದ್ದ ಚಿತ್ರ ನಮ್ಮನ್ನು ಬೆರಗುಗೊಳಿಸಿತು.

೨೨ ರಂದು ಬೆಳಿಗ್ಗೆ ೮ ರ ವೇಳೆಗೆ ನಮ್ಮ ಜೊತೆ ಬಂದಿದ್ದ ನಾಲ್ಕು ಅಸಿಸ್ಟೆಂಟ್ ಪ್ರೊಫೆಸರುಗಳ ಜೊತೆ, ಅಲ್ಲಿನ ಇಬ್ಬರು ಜೀಯಾಲಜಿಸ್ಟ್‌ಗಳೊಡಗೂಡಿ ಮೈನ್ಸ್ ಬಸ್ಸನ್ನೇರಿ ಹೊರಟೆವು. ಬಸ್ಸು ರೈಲು ನಿಲ್ದಾಣ ಬಳಸಿ ಸಾಗುತ್ತಿದ್ದಂತೆ, ಎಲ್ಲೋ ಕಪ್ಪು ಸುರಂಗದೊಳಗೆ ಪ್ರವೇಶಿಸುತ್ತಿದ್ದೇವೇನೋ ಎನಿಸಿತು. ಅಕ್ಕಪಕ್ಕ ಸಾಗುತ್ತಿದ್ದ ಮನೆಗಳೆಲ್ಲ ಕರ್ರಗಾಗಿದ್ದು, ಮರಗಿಡದ ಎಲೆಗಳೂ ಸಹ ಉಸಿರಾಡಲಾಗದೆ ಕೊರಡಾಗಿದ್ದವು. ಮಣ್ಣು ಸಹ ಕರ್ರಗೆ ಕಪ್ಪಾಗಿತ್ತು. ಹಳ್ಳಕೊಳ್ಳಗಳ ಜೆಲ್ಲಿ ಕಲ್ಲಿನ ಹಾದಿಯಲ್ಲಿ ಎತ್ತೆತ್ತಿ ಹಾಕುತ್ತಿದ್ದ ಬಸ್ಸು ಇದ್ದಿಲುಬಯಲಿಗೆ ಹತ್ತಿರವಾಗುತ್ತಿತ್ತು. ನಾವು ಇಂದು ವೀಕ್ಷಿಸುತ್ತಿರುವುದು ತೆರೆದ ಗಣಿ. ಇದ್ದಿಲು ೩೦೦ ಅಡಿಗಳ ಮೇಲಿದ್ದರೆ, ತೆರೆದ ಗಣಿಗಳ ಮೂಲಕ; ಅದಕೂ ಒಳಗಿದ್ದರೆ, "ಅಂಡರ್‌ಗ್ರೌಂಡ್" ಗಣಿ ಮೂಲಕ

ಕೆಲಸ ಸಾಗುತ್ತದೆ. ಆ ಇದ್ದಿಲ ಬಯಲಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರೆಲ್ಲಾ ವಿಷ ಅನಿಲವಾದ ಮಿಥೇನ್ ತುಂಬಿದ ಸುರಂಗಗಳಲ್ಲಿ ದೈತ್ಯಾಕಾರದ ಯಂತ್ರಗಳಾದ ಅಲ್‌ಪಾಕ್‌ಗಳ, ಬುಲ್‌ಡೋಜರ್‌ಗಳ ಮತ್ತು ಲಾರಿಗಳ ಜೊತೆ ಕೆಲಸ ಮಾಡಬೇಕು. ಸಾವು ನೋಡಿದ ಇದ್ದಿಲುಬಯಲು ೨ ಕಿ. ಮೀ. ಉದ್ದದ ೨/೧ ಕಿ. ಮೀ. ಅಗಲದ, ೧೫೦–೨೦೦ ಅಡಿಗಳ ಆಳದ್ದಾಗಿತ್ತು. ಇಂತಹವು ನಗರದ ಸುತ್ತಮುತ್ತ ಇನ್ನೂ ೨೫ ಬಯಲುಗಳ ಜೊತೆಗೆ ಹತ್ತಾರು ಕೆಲಸಗಾರರೊಡಗೂಡಿ "ಅಂಡರ್‌ಗ್ರೌಂಡ್ ಮೈನ್ಸ್"ಗಳಲ್ಲೂ ಲಕ್ಷಾಂತರ ಕೆಲಸ ನಡೆಯುತ್ತಿದೆ.

ಜೊತೆಯಲ್ಲೇ ಬಂದಿದ್ದ ಜಿಯಾಲಜಿಸ್ಟ್ ಒಬ್ಬರನ್ನು ಛೆಸ್‌ನಾಲಾದ ಬಗ್ಗೆ ಕೇಳಿದಾಗ, ದೂರದಲ್ಲಿದ್ದ ಗಣಿಯೊಂದನ್ನು ತೋರಿಸಿ "ಅದೇ ಛೆಸ್‌ನಾಲಾ, ಕೆಲಸ ನಡೆಯುತ್ತಿಲ್ಲ. ಮುಚ್ಚಲಾಗಿದೆ" ಎಂದರು. ಛೆಸ್‌ನಾಲ ದುರಂತ ಹೇಗಾಯಿತೆಂದು ಪ್ರಶ್ನಿಸಿದಾಗ, "ಅಪಾಯ ವಲಯವೆಂದು ಕಡೆಗಣಿಸಿದ್ದ ಜಾಗದಲ್ಲಿ ತಿಳಿಯದೇ, ಕೆಲವು ಕೆಲಸಗಾರರು, ಕೆಲಸಕ್ಕೆಂದು ಬಂದು ಬ್ಲಾಸ್ಟ್ ಇಟ್ಟಿದ್ದರಿಂದ ಕೆಲವೇ ನಿಮಿಷಗಳಲ್ಲಿ, ಗಣಿಯಲ್ಲಿ ತುಂಬಿದ್ದ ನೀರಿನ ದುರಂತಕ್ಕೊಳಗಾದರು" ಎಂದರು. ಎಲುಬುಗಳಿಂದಲೇ ನಿರ್ಮಿತವಾದಂತಿದ್ದ ಛೆಸ್‌ನಾಲದ ಸುತ್ತಮುತ್ತ ಹರಿಯುತ್ತಿದ್ದ ಸಣ್ಣ ಸಣ್ಣ ಝರಿಗಳು ಕರ್ರಗೆ ಕಾಣಿಸುತ್ತಿದ್ದವು.

ಇದ್ದಿಲು, ಒಂದೆಡೆ ಮಾನವನ ನಾಗರೀಕತೆಯ ಉತ್ತುಂಗದೆಡೆಗೆ ಪ್ರವೇಶಿಸಿದರೆ, ಮತ್ತೊಂದೆಡೆ ಆತನನ್ನು ಕಬಳಿಸುತ್ತಾ ಸಾಗುತ್ತದೆ. ಇದ್ದಿಲು ಗಣಿಗಳಲ್ಲಿ ಕೆಲಸ ಮಾಡುವ ಕಾರ್ಮಿಕರು ಉಸಿರಾಡುವಾಗ ಉಸಿರಿನಲ್ಲಿ ಬೆರೆತ ಕಾರ್ಬನ್ನಿನ ಸಣ್ಣ ಕಣಗಳು ಉಸಿರುಗೂಡಿನ ಮೇಲೆ ಕೂತು, ಸುತ್ತಲಿರುವ ಜಾಗವನ್ನು ತಿನ್ನುತ್ತಾ ಸಾಗಿ, ಕೊನೆಗೆ ಉಸಿರುಗೂಡು ಪಂಕ್ಚರ್ ಆಗುತ್ತಾ, ಕಾರ್ಮಿಕ ರಕ್ತ ಕಕ್ಕಿ ಸಾಯುತ್ತಾನೆ. ಇದ್ದಿಲ ವಲಯದಲ್ಲಿ ಈ ರೀತಿ ನರಳುವ ಕಾಯಿಲೆಗೆ "ನಿಮ್ಯಾಟೋ–ಕೋಸಿಸ್" ಎನ್ನುತ್ತಾರೆ. ಈ ರೋಗಗಳು ಇದ್ದಿಲು ಬಯಲಿಗಳಿಗಷ್ಟೇ ಸೀಮಿತವಲ್ಲ, ಚಿನ್ನದ ಗಣಿಗಳಲ್ಲಿ "ಸಿಲಿಕೋಸಿಸ್" ಎಂದು, ಮೈಕಾಗಳಲ್ಲಿ ಕೆಲಸ ಮಾಡುವವರಿಗೆ "ಮೈಕೋಟೋಸಿಸ್", ಆಸ್ ಬೇಸ್ಟಾನ್‌ಗಳಲ್ಲಿ ಕೆಲಸ ಮಾಡುವವರಿಗೆ "ಆಸ್‌ಬೇಸ್ಟಾಸಿಸ್" ಇತ್ಯಾದಿ ಹೆಸರುಗಳಲ್ಲಿ ಕಾಣಿಸಿಕೊಂಡು ಮನುಷ್ಯ ದೇಹದ ಎಲುಬು ಮತ್ತು ಕಿಡ್ನಿಗಳ ವಿನಾಶಕ್ಕೆ ಕಾರಣವಾಗುತ್ತವೆ.

ಮೇಲೆ ಹೇಳಿರುವ ಪ್ರತಿಯೊಂದು ರೋಗವು ಮೊದಲು ಅಸ್ತಮಾದಂತೆ ಪ್ರಾರಂಭವಾಗಿ 'ಸಿಲಿಕೋಸಿಸ್' ನಿಂದ ಕ್ಯಾನ್ಸರ್‌ವರೆಗೂ ಹಂತಹಂತವಾಗಿ ಸಾಗಬಹುದು. ಇನ್ನೊಂದು ಮುಖ್ಯವಾದ ಸಂಗತಿ ಎಂದರೆ ದನ್‌ಬಾದಿನ (ಕೆ. ಜಿ. ಎಫ್. ಕೂಡ) ನಗರವಾಸಿಗಳಿಗೆ ಅದರಲ್ಲೂ ಇದ್ದಿಲು ಗಣಿಗಳಲ್ಲಿ ಕೆಲಸಮಾಡದಿದ್ದವರಿಗೂ ಮೇಲೇಳಿರುವ ಎಲ್ಲ ರೋಗಗಳು ತಪ್ಪಿದ್ದಲ್ಲ. ಕಾರ್ಮಿಕರಿಗಿಂತ ಸ್ವಲ್ಪ ತಡವಾಗಬಹುದಷ್ಟೇ.

ಈ ರೋಗಗಳಿಂದ ತಪ್ಪಿಸಿಕೊಳ್ಳಲು ದಾರಿಯೇ ಇಲ್ಲವೆಂದರೂ ತಪ್ಪಾಗಲಾರದು. ಕಾರಣ ಮೂಗು, ಕಿವಿ, ಬಾಯಿ ಮುಚ್ಚಿಕೊಂಡು ಸುರಂಗಗಳಲ್ಲಿ ಕೆಲಸ ಮಾಡಲು ಸಾಧ್ಯವಿಲ್ಲ. ಇದರ ಬಗ್ಗೆ (C. M. R. I) 'ಸೆಂಟ್ರಲ್ ಮೈನಿಂಗ್ ರೀಸರ್ಚ್ ಇನ್‌ಸ್ಟಿಟ್ಯೂಟ್'ನಲ್ಲಿ ಕೆಲವು ಪ್ರಶ್ನೆಗಳಾಕಿದೆ. ಕೇಳಿ ಬಂದ ಉತ್ತರ ಕೋಪ ತರಿಸಿತು. ವಿಜ್ಞಾನಿಯೊಬ್ಬನನ್ನು "ಇದೆಲ್ಲವನ್ನು ತಡೆಯಲು ಇದುವರೆಗೂ ನೀವು ಯಾವ ರೀತಿಯ ಪ್ರಯತ್ನವನ್ನು ಮಾಡಿಲ್ಲವೆ?" ಎಂದಾಗ ಆತ ವ್ಯಂಗ್ಯವಾಗಿ "ಲಂಗ್ಸ್‌ನ್ನು ತೆಗೆದಿಡುವುದನ್ನು ಬಿಟ್ಟರೆ ಬೇರೆ ದಾರಿಯೇ ಇಲ್ಲಾ" ಎಂದುಬಿಟ್ಟ.

ಕೆಲಸಗಾರರ ಬಗ್ಗೆ ಅನುಕಂಪ ತೋರಿದ ಮತ್ತೊಬ್ಬ ವಿಜ್ಞಾನಿ ಮೂಗು, ಬಾಯಿ ಮುಚ್ಚಿಕೊಂಡು ಕೆಲಸ ಮಾಡಲು ತಯಾರಿಸಿದ ಒಂದು ಚಿಕ್ಕ ಸಲಕರಣೆಯನ್ನು ತೋರಿಸಿ, ಸರಕಾರಕ್ಕೆ ರೆಕಮೆಂಡ್ ಮಾಡಿದ್ದೇವೆ. ಆದರೂ ಸಹ ಇದರಿಂದ ಯಾವ ಫಲವೂ ಸಿಗುವುದಿಲ್ಲವೆಂದರು. ಕಾರಣ ಸುರಂಗಗಳಲ್ಲಿ ಉಸಿರಾಡುವುದೆ ಕಷ್ಟವಾಗಿರುವಾಗ ಮೂಗು ಬಾಯಿ ಮುಚ್ಚಿಕೊಂಡು ಕೆಲಸ ಮಾಡಲಾಗುವುದಿಲ್ಲ. ಆ ರೀತಿ ಮುಚ್ಚಿದರೂ ಎರಡು ನಿಮಿಷಕೊಮ್ಮೆ ತೆಗೆದು ಉಸಿರಾಡಬೇಕಾಗುತ್ತೆಂದರು.

ಇದೆಲ್ಲಾ ನನ್ನ ತಲೆ ತಿನ್ನುತಿರುವಾಗ, ಮರುದಿನ ಬೆಳಗಿನ ಜಾವ ದನ್‌ಬಾದ್ ನಗರ ಕುಡಿದು ಮತ್ತೇರಿ ವಾಂತಿ ಮಾಡಿದ ಕಲ್ಮಶ ವಾಯುವನ್ನು ಸೀಳಿಕೊಂಡು ರೈಲು ಸಾಗುತ್ತಿತ್ತು. ಉರಿಯುತ್ತಿರುವ ಬೆಂಕಿ ವಲಯ, ಹರಿಯುತ್ತಿರುವ ಪೇತಲ ರಿಕ್ಷಾ, ಹೊಂಚು ಹಾಕುತ್ತಿರುವ ನೂರಾರು ಛೆಸ್‌ನಾಲಾಗಳು, ಒಳಗೊಳಗೆ ಕರಗುತ್ತಿರುವ ಎಲುಬುಗೂಡುಗಳು ಮನಸ್ಸಿನಲ್ಲಿ ಮೊಟ್ಟೆಗಳನ್ನಾಕುತ್ತಿದ್ದವು.

# ರುಕ್ಮಿಣಿ ಕೊಂದ ಸ. ಕ. ಇಲಾಖೆ

**ವರದಿ : ಜಿ. ಕೆ. ಬಸವರಾಜು**

ಸರ್ಕಾರದ ಹೊಣೆಗೇಡಿ ಇಲಾಖೆಗಳ ಲಿಸ್ಟಿನಲ್ಲಿ ಸೇರುವ ಸಮಾಜ ಕಲ್ಯಾಣ ಇಲಾಖೆ ವಿದ್ಯಾರ್ಥಿಗಳ ಕೊಲೆ ಮಾಡಿ ಕಲ್ಯಾಣ ಸಾಧಿಸುತ್ತದೆ.

ಚಿಕ್ಕಮಗಳೂರಿನ ಸಾರ್ವಜನಿಕ ವಿದ್ಯಾರ್ಥಿ–ವಿದ್ಯಾರ್ಥಿನಿಯರೇ– ನಿಲಯದಲ್ಲಿ ಇಲಾಖೆಯ ನೌಕರರು ಎಲ್ಲೋ ಹಡಬಿಟ್ಟೇ ಸಿಕ್ಕಿದ ಹುಳು ಹಿಡಿದು ವಿಷಪೂರಿತವಾದ ಅಕ್ಕಿಯನ್ನು ತಂದು ಬೇಯಿಸಿ ರಕ್ಮಿಣಿ ಎಂಬ ಎಳೆಯ ವಿದ್ಯಾರ್ಥಿಯನ್ನು ಬಲಿ ತೆಗೆದುಕೊಂಡಿದ್ದಾರೆ. ಸುಮಾರು ಒಂದು ವಾರದಿಂದಲೂ ವಿದ್ಯಾರ್ಥಿಗಳು ಹುಳು ಹಿಡಿದ ಅನ್ನ ತಿನ್ನಲಾರದೆ, ಕ್ಯಾಕರಿಸುತ್ತಾ ದೂರು ಹೇಳಿದಾಗ ಜಯಲಕ್ಷ್ಮಿ ಎಂಬ ರಾಕ್ಷಸಿ ವಾರ್ಡನ್‌ಳಿಂದ ಬಯ್ಯಿಸಿಕೊಳ್ಳುತ್ತಾ ನರಕಯಾತನೆ ಪಡುತ್ತಿದ್ದರು. ದಿ. 19–6–82 ರಂದೂ ಅನ್ನದಲ್ಲಿ ಬೆಂದ ಹುಳುಗಳನ್ನು ತಿಂದ ವಿದ್ಯಾರ್ಥಿಗಳೆಲ್ಲ ಕೆಲವರಿಗೆ ವಾಂತಿ ಬೇಧಿ ಪ್ರಾರಂಭವಾಯಿತು. ಕೆಲವು ವಿದ್ಯಾರ್ಥಿನಿಯರು ಹೊಟ್ಟೆನೋವಿನಿಂದ ವಿಲವಿಲನೆ ಒದ್ದಾಡುತ್ತಿದ್ದಾಗ ರಾಕ್ಷಸಿ ಜಯಲಕ್ಷ್ಮಿ 'ಏನೂ ಆಗಿಲ್ಲ ಕಣ್ರೀ" ಎನ್ನುತ್ತಿದ್ದಳು. ಕಡೆಗೆ ಸೀರಿಯಸ್ಸಾಗಿ ಆಸ್ಪತ್ರೆ ಸೇರಿದ್ದ 11 ವರ್ಷದ ಎಳೆಯ ಮುದ್ದು ಬಾಲಕಿ ರುಕ್ಮಿಣಿಯು ದೂರದ ಊರಿನಲ್ಲಿದ್ದ ಅಪ್ಪ, ಅವ್ವ, ಅಣ್ಣತಮ್ಮಂದಿರನ್ನು, ಹತ್ತಿರದಲ್ಲೇ ನಿಂತಿದ್ದ ಗೆಳತಿಯರನ್ನು ಅಗಲಿದಳು. ಹಲವಾರು ದಿನಗಳ ಹೊಟ್ಟೆನೋವಿನ ಸಂಕಟವನ್ನು ತಾಳಿಕೊಂಡಿದ್ದ 100 ವಿದ್ಯಾರ್ಥಿನಿಯರು ಅಂದು ಗೆಳತಿಯ ಸಾವಿಗೆ ಕಣ್ಣೀರ್ಗರೆದರು.

ಕಳೆದ ಮೂರು ದಿನಗಳಿಂದ ವಾಂತಿ ಭೇದಿ, ಹೊಟ್ಟೆ ನೋವಿನಿಂದ ತತ್ತರಿಸುತ್ತಿದ್ದ ಉಳಿದ ವಿದ್ಯಾರ್ಥಿನಿಯರಿಗೆ ವಾರ್ಡನ್ನಳು ಯಾವ ಔಷಧಿಯನ್ನೂ ತರಿಸಿಕೊಡಲಿಲ್ಲ. ಕೇಳಿದವರಿಗೆಲ್ಲಾ "ಸರ್ಕಾರ ಕೊಡೋ ಅಕ್ಕೀನೇ ಇಂಥದ್ದು" ಎಂದ ಗತ್ತಿನಿಂದ ಒದರಿದಳು.

ನೂರಹತ್ತು ವಿದ್ಯಾರ್ಥಿನಿಯರಿಗೆ ಬಲಾತ್ಕಾರವಾಗಿ ಊಟಮಾಡಿಸಿದ ವಾರ್ಡನ್ ಈ ಅಕ್ಕಿಯನ್ನು ಎಲ್ಲಿಂದ ತಂದಳೆಂದು ಪರಿಶೀಲಿಸಿದಾಗ ಇದು 'ಜನತಾ–ಬಜಾರ್'ದೆಂದು ಗೊತ್ತಾಯಿತು.

ಹಾಸ್ಟೆಲ್‌ನಲ್ಲಿ ೭ ಚಿಕ್ಕ ಚಿಕ್ಕ ಕೊಠಡಿಗಳಿದ್ದು ಒಂದೊಂದು ಕೊಠಡಿಯಲ್ಲೂ ಕೊಟ್ಟಿಗೆಯಲ್ಲಿ ಕುರಿಗಳನ್ನು ತುಂಬಿದಂತೆ ೧೫–೨೦ ವಿದ್ಯಾರ್ಥಿಗಳನ್ನು ತುಂಬಲಾಗಿದೆ. ಈ ಕೊಠಡಿಗಳಲ್ಲಿ ತಿಗಣೆ, ಸೊಳ್ಳೆ, ಇಲಿಗಳು ಮಾತ್ರ ಸುಖವಾಗಿ ವಾಸಮಾಡುತ್ತಿವೆ.

# “ನೊಂದ ದಲಿತರೊಂದಿಗೆ ಹಿಂದುಳಿದವರೆಲ್ಲ ಕೂಡಿಕೊ

ಅರಸು ಪಾರ್ಟಿ ಚಂದ್ರೇಗೌಡರನ್ನು ಜಯಮಹಲ್‌ನ ಬೂತ್‌ಬಂಗಲೆಗಳ ಮಧ್ಯ ಹುಡುಕಿ ಸಂದರ್ಶನ ಕೇಳಿದರೆ ‘ಇಲ್ಲ’ವೆಂದರು. ಅವರು ಸ್ನಾನ, ತಿಂಡಿ ಇತ್ಯಾದಿ ಮುಗಿಸಿ ಎಲ್ಲೋ ಹೋಗಲು ಕಾರ್ ಹತ್ತಲು ಬಂದಾಗ “ತಮಗೆ ಮೂರು ಬಾರಿ ಮೀಸಲಾತಿಯ ಬಗ್ಗೆ ಪ್ರಶ್ನೆ ಮಾಲಿಕೆ ಕೊಟ್ಟು ಸಂದರ್ಶನ ಕೇಳಿದೆ. ತಾವು ಏನನ್ನೂ ಹೇಳಲಿಲ್ಲ. ನಿಮಗೆ ಪುರುಸೊತ್ತಿಲ್ಲದಿದ್ದರೆ ನಿಂತಲ್ಲೇ ಉತ್ತರ ಹೇಳಿದರೆ ಸಾಕು ಹೀಗೆ ಬರೆದುಕೊಳ್ಳುತ್ತೇನೆ” ಎಂದೆ. ಚಂದ್ರೇಗೌಡರು “ನೋಡ್ರಿ, ಅದು ನನಗೆ ಗೊತ್ತು. ನಾನು ಒಳಗೇ ದಲಿತರಿಗೆ ಎಲ್ಲಾ ಮಾಡುತ್ತೇನೆ. ಈ ರೀತಿ ಸಾರ್ವಜನಿಕವಾಗಿ ಏನನ್ನೂ ಹೇಳಲು ಸಾಧ್ಯವಿಲ್ಲ’ ಎಂದು ನುಣುಚಿಕೊಂಡರು.

ಹೋಗಲಿ ಇವರ ಗಾಡ್‌ಫಾದರ್ ಅರಸು ಅವರನ್ನಾದರೂ ಒಮ್ಮೆ ನೋಡಿ ಬಿಡೋಣವೆಂದು ಹೊರಟೆ. ಅಧಿಕಾರ ಬಿಟ್ಟಮೇಲೆ ಕಲ್ಲಳ್ಳಿಗೆ ಈ ಮುದುಕ ಕಾಲುಕಿತ್ತಿದ್ದರೆ ಅನ್ನುವ ಅನುಮಾನ ಬೇರೆ ಇತ್ತು. ನೋಡಿದೆ. ಅರಸು ಬಂಗಲೆಯ ಬಳಿ ಜನರ್‍ಯಾರೂ ಇರಲಿಲ್ಲ. ಆವರಣದ ಒಳಗೆ ಎಲ್ಲಿ ನೋಡಿದರಲ್ಲಿ ತರಗೆಲೆಗಳು ಚೆಲ್ಲಿಕೊಂಡು ಬಿದ್ದಿದ್ದವು. ಮನೆ ಒಳಗೆ ಹೊಕ್ಕಾಗ ಹೊರಗಿನ ರೂಂನಲ್ಲಿ ಹಳ್ಳಿಯ ಮುದುಕ ಮುದುಕಿ ಕುಳಿತಿದ್ದರು. ಒಳಗಡೆ ಚೇರ್‌ನಲ್ಲಿ ವಿಭೂತಿ ಬಳಿದುಕೊಂಡು ಬಾಯಿ ತುಂಬಾ ಎಲೆ ಅಡಿಕೆ ಹಾಕಿಕೊಂಡು ಕುಳಿತಿದ್ದ ಸೆಕ್ರೆಟರಿಗೆ ನಮಸ್ಕರಿಸಿ ವಿಷಯ ತಿಳಿಸಿದೆ. “ಸ್ವಲ್ಪ ಹೊತ್ತು ಇರಿ, ಸಾಹೇಬ್ರು ಸ್ನಾನ ಮಾಡ್ತಾ ಇದ್ದಾರೆ” ಅಂದರು. ಸರಿ, ಹಳ್ಳಿಯವರು ಕುಳಿತಿದ್ದ ರೂಂನಲ್ಲಿ ಬಂದು ಕುಳಿತೆ. ಇನ್ನೆಷ್ಟು ಹೊತ್ತಿಗೆ ಈ ಸ್ನಾನ ಮುಗಿಯುತ್ತದೊ ಎಂದು ರೂಂನ ಸುತ್ತಾ ಕಣ್ಣಾಡಿಸುತ್ತಾ ಕುಳಿತೆ, ಕಾದೆ. ಗುಜರಾತಿನಲ್ಲಿ ಹತ್ತಿಕೊಂಡ ಮೀಸಲಾತಿ ಬೆಂಕಿ ಎಲ್ಲಾ ಕಡೆಯೂ ಆವರಿಸಿಕೊಳ್ಳುತ್ತಿರುವುದು, ಅಮಾಯಕರ ಹೆಣಗಳುರುಳುತ್ತಿರುವುದು, ನನ್ನನ್ನು ಹಿಡಿದು ಅಲ್ಲಾಡಿಸುತ್ತಿತ್ತು. ಕೊನೆಗೂ ಪಕ್ಕದ ಬಾಗಿಲು ತೆರೆಯಿತು. ಹಳ್ಳಿಯ ಮುದುಕ ಮುದುಕಿಯರ ಹಿಂದುಗಡೆಯಿಂದ ಅರಸರ ರೂಮಿನ ಕಡೆ ನಡೆದೆ. ರೂಮೊಳಗಿನ ದೃಷ್ಯ ನೋಡಿ ಮನಸ್ಸು ಕಿವುಚಿದಂತಾಯಿತು. ಆ ಹಳ್ಳಿಯವರು ಅರಸರ ಕಾಲಿಗೆ ಬಿದ್ದು ಸಾಷ್ಟಾಂಗ ನಮಸ್ಕಾರ ಮಾಡುತ್ತಿದ್ದರು. ನಮಸ್ಕಾರ ಮಾಡಬೇಕೆಂದಿದ್ದ ನನ್ನ ಕೈಗಳಿಗೆ ಕಬ್ಬಿಣದ ಗುಂಡು ಕಟ್ಟಿದಂತಾಗಿ ಅವು ಮೇಲೇಳಲೇ ಇಲ್ಲ.

ನಂತರ ಅರಸರ ದೃಷ್ಟಿ ನನ್ನ ಮೇಲೆ ಬಿತ್ತು. ವಿಷಯ ತಿಳಿಸಿದೆ. ನಾಳೆ ಬನ್ನಿ ಎಂದರು. ದಲಿತರಿಗೆ ಮೀಸಲಾತಿ ಅಗತ್ಯವೆ ಎನ್ನುವ ಬಗ್ಗೆ ಹಿಂದುಳಿದ ವರ್ಗದ ಛಾಂಪಿಯನ್ ಅರಸರ ಭಾವನೆಗಳನ್ನ ಅರ್ಥಮಾಡಿಕೊಳ್ಳಲೇ ಬೇಕೆಂಬ ಹಠದಿಂದ ‘ನಾಳೆಗಾಗಿ’ ಕಾದೆ.

ಮತ್ತೆ ನಾಳೆ (ಮೇ ೩, ೧೯೮೧) ಬಂತು. ಬೆಳಿಗ್ಗೆ ೯ ಗಂಟೆಗೆ ಅರಸರ ಮನೆಗೆ ಹೋದಾಗ, ಅರಸರು ಎರಡು ಕೈಗಳನ್ನೂ ತಲೆ ಹಿಂದೆ ಇಟ್ಟುಕೊಂಡು ಮೇಲ್ಛಾವಣಿಯತ್ತ ಆಲೋಚನಾ ಮಗ್ನರಾಗಿ ನೋಡಲು ಪ್ರಾರಂಭಿಸಿದರು.



ದೇವರಾಜ ಅರಸು

ಮಾತುಕತೆ ಪ್ರಾರಂಭವಾಗುವಾಗ, ಬೆಂಗಳೂರು ದಾಸರ ಕಾಲೋನಿಯ ದಲಿತ ಪುಡಾರಿಯೊಬ್ಬರು ಕೈಕಟ್ಟಿನಿಂತು ಅರಸರ ಯೋಗಕ್ಷೇಮ ವಿಚಾರಿಸಿದರು. ಆದರೆ ಅರಸು ಕೇಳಿಸದವರಂತೆ ಇದ್ದರು. ಮತ್ತೆ ಆ ಪುಡಾರಿ ನಮ್ಮ ದಲಿತ ಸಂಘರ್ಷ ಸಮಿತಿಯ ಮೇಲೆ ದೂರು ಹೇಳಲು ಪ್ರಾರಂಭಿಸಿದ. “ಸಾರ್, ಈ ಸಮಿತಿಯವರು ಎಲ್ಲಾ ಸರಿಯೆ. ಆದ್ರೆ ಆಗಸ್ಟ್ ೧೫ ರಂದು ಕಪ್ಪು ಬಟ್ಟೆಧರಿಸಿ ಕರಾಳ ದಿನ ಆಚರಣೆ ಮಾಡ್ತಾರೆ ಸಾರ್” ಅಂದ. ಅರಸು ಕಣ್ಣು ಮುಚ್ಚಿ ಹಾಗೆಯೇ ಕುಳಿತಿದ್ದರು. ಮತ್ತೇ ಆ ಪುಡಾರಿ “ನಮಗೇನು ಸ್ವತಂತ್ರ ಬಂದಿಲ್ಲವೇನ್ ಸಾರ್, ಇವರು ಹೀಗೆ ಆಚರಣೆ ಮಾಡಾಕೆ” ಎಂದ. ಅರಸು ಆಗ “ಸುಮ್ಮನಿರ್ರಿ.... ನೀವು” ಎಂದರು. ಆ ಪುಡಾರಿ ತೆಪ್ಪಗಾಗಿ ಸುಮ್ಮನೆ ಕೈಕಟ್ಟಿ ಕುಳಿತ. ಸಂಭಾಷಣೆ ಪ್ರಾರಂಭವಾಯಿತು. ಅರಸರು ಅಲುಗಾಡದಂತೆ ದಲಿತರ ಸಮಸ್ಯೆಗಳ ಬಗ್ಗೆ ಮಾತಾಡತೊಡಗಿದರು.

ಪ್ರಶ್ನೆ : ದಲಿತರ ಬಗ್ಗೆ ನಿಮಗೇನನಿಸುತ್ತದೆ ?

ಉತ್ತರ : ದಲಿತರು ಕಡು ಬಡತನದಲ್ಲಿ ನರಳುತ್ತಿದ್ದಾರೆ. ಅವರಲ್ಲಿ ಆರ್ಥಿಕ ಶಕ್ತಿಯಿಲ್ಲ, ಅಧಿಕಾರ ಬಲವಿಲ್ಲ. ಸಂಘಟನೆಯ ಪ್ರಾಬಲ್ಯವೂ ಇಲ್ಲ.

ಪ್ರಶ್ನೆ : ಮೀಸಲಾತಿ ಮುಂದುವರಿಕೆ ಅಗತ್ಯವೇ ?

ಉತ್ತರ : ಮೀಸಲಾತಿ ಮುಂದುವರಿಯಲೇ ಬೇಕು

ಅದರಲ್ಲಿ ಅನುಮಾನವಿಲ್ಲ. ಆದರೆ ದಲಿತರ ಪ್ರಗ
ಮೀಸಲಾತಿ ಒಂದೇ ಸಾಕಾಗುವುದಿಲ್ಲ. ಇ
ಜೊತೆಗೇ ಅವರ ಆರ್ಥಿಕ ಸ್ಥಿತಿ ಸುಧಾರಣೆಗೆ ಕ
ಕಾರ್ಯಕ್ರಮಗಳೂ ಅಗತ್ಯವಾಗುತ್ತವೆ. ಇವನ
ಇಂದಿರಾಗಾಂಧಿ ಮಾಡ್ತಾರೆ ಅನ್ನೋ ನಂಬಿಕೆ ಇತ
ಆದರೆ ಆಕೆಗೆ ಸಮಸ್ಯೆಯ ಸ್ವರೂಪ ಚೆನ್ನಾ
ಗೊತ್ತಿದ್ದರೂ ಅದನ್ನು ಎದುರಿಸೋಕೆ ಆಕೆ ಸಿ
ವಿಲ್ಲ. ಮೇಲ್ಜಾತಿಯವರು ಎದುರು ಬೀಳುತ್ತಾ
ಅನ್ನುವ ಭಯ. ರಾಜಕಾರಣಿಗಳೆಲ್ಲರೂ ಅಷ್ಟೆ, ದ

ಅಸ್ಪೃಶ್ಯ ದಲಿತರ ಬಗ್ಗೆ ‘ಅಷ್ಟಕಷ್ಟೆ’ ಎ
ಅವರು—“ಒಟ್ಟು ಹಿಂದುಳಿದ ಜಾ
ಎಂದು ನಂಬಿದ್ದವರು. ಇದಕ್ಕಾಗಿ
ಆತ್ಮಾಭಿಮಾನ ತಂದುಕೊಡಲು ಯ
ರಾತಿನಲ್ಲಿ ಪ್ರಾರಂಭವಾದ ಮೀಸಲಾತಿ
ಗೊಂಡ ದಲಿತ ಸಂಘರ್ಷ ಸಮಿತಿಯ
ಮಾತುಕತೆ ಇಲ್ಲಿದೆ. ನಾವನ್ನು ಮೀರಿ
ಕ್ಷಣ ದಂಗಾಗುವಂತೆ, ಸಾವು ಕಂಡ ಅ

ತರನ್ನು ಕೇವಲ ಓಟುಗಳಾಗಿ ನೋಡ್ತಾರೆ. ದ
ತರೂ ಕೂಡ ತಿಳುವಳಿಕೆ ಇಲ್ಲದೆ ಓಟು ಹಾಕ್ತಾ
ಸಂವಿಧಾನ ಬದ್ಧವಾಗಿ ಅವರಿಗೆ ಸಿಗಬೇಕಾದ ಸ
ಲತ್ತುಗಳನ್ನು ಕೊಡೋದಕ್ಕೂ ಇಂದಿರಾಗಾಂಧಿ ಸ
ಯಾದ ಒತ್ತಾಯ ತರ್ತಾ ಇಲ್ಲ.

ಪ್ರಶ್ನೆ : ದಲಿತ ವಿಮೋಚನೆಗೆ ನೀವು ಸೂಚಿಸು
ದಾರಿ ಯಾವುದು ?

ಉತ್ತರ : ದಲಿತರು ಉದ್ಧಾರವಾಗ ಬೇಕಾ
ಅವರೇ ಅಧಿಕಾರವನ್ನು ಕಸಿದುಕೊಳ್ಳಬೇಕು. ಇ
ಕ್ಕಾಗಿ ತೀವ್ರವಾದ ಹೋರಾಟ ನಡೆಯಬೇಕಾಗುತ
ಜೊತೆಯಲ್ಲೇ ಅವರ ಆರ್ಥಿಕ ಪ್ರಗತಿಗೆ ಕಾಯ
ಕ್ರಮಗಳನ್ನು ಹಾಕಿಕೊಳ್ಳಬೇಕು. ಭೂ ಸುಧಾರ
ಕಾಯ್ದೆ ಕಡ್ಡಾಯವಾಗಿ ಜಾರಿಗೆ ಬರಬೇಕು. ಹ
ಜಾರಿ ಮಾಡುವಾಗಲೂ ಪ್ರಾಮಾಣಿಕತೆ ಇರಬೇ
ದಲಿತರಿಗೆ ಭೂಮಿ ಸಿಕ್ಕರೆ ಸ್ವತಂತ್ರವಾಗಿ ಜೀ
ನಡೆಸೋಕೆ ಸಾಧ್ಯವಾಗುತ್ತೆ. ಅವರ ಸಮಸ್ಯೆಗಳ
ಶೇಕಡ ೩೦ ರಷ್ಟು ಪರಿಹಾರವಾದಂತಾಗು
ಇದಿಷ್ಟಲ್ಲದೆ ಜೀತ ವಿಮುಕ್ತಿ, ಋಣ ಪರಿಹ
ಇವೆಲ್ಲವನ್ನೂ ಹಠದಿಂದ ಜಾರಿಗೆ ತರ...
ನನ್ನ ಕಾಲದಲ್ಲಿ ಸ್ವಲ್ಪ ಮಟ್ಟಿಗೆ ಈ ಕಾರ್ಯಕ್ರ
ಗಳನ್ನು ಒತ್ತಾಯ ಪೂರ್ವಕವಾಗಿ ಜಾರಿಗೆ ತ

# ೦ ಅಧಿಕಾರ ಕಸಿಯಬೇಕು" : ಅರಸು

ದ್ದೇವೆ, ಇದಕ್ಕಾಗಿ ಶ್ರಮಿಸಿದ್ದೇವೆ.

ದಲಿತರೇ ಹೆಚ್ಚಾಗಿ ಇರುವ ಕಡೆ ದಲಿತ ಅಧಿಕಾರಿಗಳನ್ನೇ ನೇಮಿಸಿದ್ದೇನೆ. ಆದರೆ ಆ ಅಧಿಕಾರಿಗಳು ತಮ್ಮವರನ್ನೇ ಶೋಷಣೆ ಮಾಡುತ್ತಾ ಬಂದಿದ್ದಾರೆ. ದಲಿತ ಮಂತ್ರಿಗಳು ಕೂಡ ತಮ್ಮ ಜನರ ಕಷ ಸುಖ ವಿಚಾರಿಸಿಕೊಳ್ಳದೆ ತಂತಮ್ಮ ಸ್ವಾರ್ಥ ಸಾಧನೆಯನ್ನೇ ಧ್ಯೇಯ ಮಾಡಿ ಕೊಂಡಿದ್ದಾರೆ. ಅವರಿಗೆ ಪ್ರಮುಖ ಖ್ಯಾತೆಗಳನ್ನೆಲ್ಲಾ ಕೊಟ್ಟರೂ

ಡಿದುಕೊಳ್ಳುತ್ತಿದ್ದ ದೇವರಾಜು ಅರಸು ಡೆಯಲ್ಲೇ ದಲಿತರ ಬಿಡುಗಡೆ ಇದೆ" ಮೂಲಕ ಹಿಂದುಳಿದ ಜಾತಿಗಳಿಗೆ ಬ್ರಾಹ್ಮಣಶಾಯಿ ಶಕ್ತಿಗಳಿಂದ ಗುಜ ಂಕಿ ದೇಶವೆಲ್ಲ ಹಬ್ಬುತ್ತಿದ್ದಾಗ ಆತಂಕ ೃಷ್ಣ ಅವರು ಅರಸರೊಂದಿಗೆ ನಡೆಸಿದ ರೆಯುವ ಅಧಿಕಾರ ಮೂಢರೆಲ್ಲ ಒಂದು ಗಾಗಿ ಇದನ್ನು ಪ್ರಕಟಿಸುತ್ತಿದ್ದೇವೆ.

ಅವರಿಗೆ ತಮ್ಮ ಜನರ ಏಳಿಗೆ ಬೇಕಿಲ್ಲ. ಅವರು ಜನರ ಮಧ್ಯ ವಾಸಮಾಡೋದೂ ಇಲ್ಲ. ಇಂತಹ ದಲಿತ ಶಾಸಕ, ದಲಿತ ಮಂತ್ರಿಗಳಿಂದಲೇ ದಲಿತರಿಗೆ ಹೆಚ್ಚಿನ ಪೆಟ್ಟು.

ದಲಿತರಿಗೆ ತಮ್ಮದೇ ಆದ ವಿಶಿಷ್ಟ ಸಾಮಾಜಿಕ ಸಮಸ್ಯೆಗಳಿದ್ದಾವೆ. ಇವೆಲ್ಲಕ್ಕೂ ಪರಿಹಾರ ಏನೆಂದರೆ ದಲಿತ ಯುವಕರು ತಮ್ಮ ಜೀವನವನ್ನು ದಲಿತರಿಗಾಗಿ ತ್ಯಾಗಮಾಡಬೇಕು. ತ್ಯಾಗಮಾಡದಿದ್ದರೆ ಏನೂ ಸಾಧನೆಯಾಗೋಲ್ಲ. ವಿದ್ಯಾವಂತರಾದ ತಿಳುವಳಿಕಸ್ಥರಾದ ದಲಿತ ಯುವಕರು ಶ್ರಮವಹಿಸಿ ತಮ್ಮ ಜನರಿಗೆ ತಿಳುವಳಿಕೆ ಕೊಡಬೇಕು. ಸಂಘಟನೆ ಮಾಡಬೇಕು. ದಲಿತ ವಿಮೋಚನೆ ದಲಿತ ಯುವಕರಿಂದ ಮಾತ್ರ ಸಾಧ್ಯ. ತಮ್ಮ ಜನರಿಗೆ ಸರಿಯಾಗಿ ಸೇವೆ ಮಾಡದ ದಲಿತ ಅಧಿಕಾರಿಗಳು, ಶಾಸಕ, ಮಂತ್ರಿಗಳಿಗೆ, ಎಚ್ಚರಿಕೆ ನೀಡಬೇಕು. ಆಗಲೂ ಅವರು ಸರಿ ಹೋಗದಿದ್ದಾಗ ಅವರನ್ನು ಅಲ್ಲಿಂದ ಇಳಿಸಿ ಕೆಲಸ ಮಾಡುವವರನ್ನು ಅಲ್ಲಿಗೆ ತರಬೇಕು. ವಿದ್ಯಾವಂತ ಯುವಕರೇ ಮುಂದಾಗಿ ದುಡಿಯುವಾಗ ದಲಿತರು ದಲಿತ ನಾಯಕರೆಂದು ಹೇಳಿಕೊಳ್ಳುವವರ ಉಪದೇಶಕ್ಕಾಗಿ ಕಾಯಬೇಕಾಗಿಲ್ಲ. ದಲಿತ ಯುವಕರು ಸಂಘಟನೆ ಕಟ್ಟಿ ದಲಿತರನ್ನು ಶೋಷಣೆ ಮಾಡುವ

ದಲಿತ ನಾಯಕರನ್ನು ಬೇಟೆಯಾಡಬೇಕು. ಆಗಲೇ ವಿಮೋಚನೆ ಸಾಧ್ಯವಾಗುವುದು.

ಆಡಳಿತ ಮತ್ತು ಶಕ್ತಿ ರಾಜಕಾರಣದಲ್ಲಿ ದಲಿತ ಯುವಕರು ಹೆಚ್ಚಿನ ಅಧಿಕಾರಗಳಿಸಿ ಕೊಳ್ಳಬೇಕು. ಇಲ್ಲದಿದ್ದರೆ ಆರ್ಥಿಕ ಪ್ರಗತಿ ಕಷ್ಟವಾಗುತ್ತದೆ. ಶೋಷಣೆಗೊಳಗಾದವರೇ ಸರ್ಕಾರ ಕಟ್ಟಬೇಕು. ದಲಿತರು ಬರೀ ಶೇ. ೨೦ ರಷ್ಟು ಇದ್ದೀರಿ. ಆದ್ದರಿಂದ ನಿಮ್ಮ ಜೊತೆ ಇನ್ನಿತರ ಹಿಂದುಳಿದವರನ್ನು ಸೇರಿಸಿಕೊಂಡು ಅಧಿಕಾರ ಕಸಿಯಬೇಕು. ಆದುವ



ಗೋಪಾಲಕೃಷ್ಣ

ರಿಗೆ ದಲಿತರಿಗೆ ಬಿಡುಗಡೆಯಿಲ್ಲ, ಹಿಂದುಳಿದವರಿಗೂ ನಿಮಗೂ ಅಡ್ಡಿಯಾಗಿರುವುದು ಅಸ್ಪೃಶ್ಯತೆ ಒಂದೆ. ಅಸ್ಪೃಶ್ಯತೆ ಬಿಟ್ಟರೆ ನೀವೂ ಹಿಂದುಳಿದವರೇ ಆದುವ

## ಮಾತುಕತೆ

ರಿಂದ ನೀವಿಬ್ಬರೂ ಒಟ್ಟುಗಬೇಕು. ಅಸ್ಪೃಶ್ಯತೆ ಭಾವನೆಯನ್ನು ನಮ್ಮೂರಿನಲ್ಲಿ ತೆಗೆದು ಹಾಕಲು ನನ್ನ ಮನೆಯಲ್ಲಿ ನೀರು ಸೇದಲು ಒಬ್ಬ ಹರಿಜನನನ್ನು ನೇಮಿಸಿದ್ದೇನೆ. ಆತ ನೀರು ಸೇದಿ ತಂದರೇನೆ ನಮಗೆ ಕುಡಿಯಲು ನೀರು. ಇಲ್ಲವಾದರೆ ಇಲ್ಲಾ. ನಮ್ಮ ಬಾವಿಯಲ್ಲೇ ಸುತ್ತ ಮುತ್ತಲಿನವರು ನೀರು ಸೇದಲು ಬರಬೇಕಿತ್ತು. ಕೆಲವರು ಹರಿಜನ ಹುಡುಗ ನೀರು ಸೇದುವುದನ್ನು ನೋಡಿ ಪ್ರತಿಭಟಿಸಿದರು. ನನ್ನ ಹತ್ತಿರ ಬಂದು ಮನವಿ ಮಾಡಿದರು. ನಾನು ಅವರೆಲ್ಲರಿಗೂ ತಿಳಿಸಿದೆ, ಹೇಳಿದೆ, ನೀವು ಈ ಅಸ್ಪೃಶ್ಯತೆಯ ಆಚರಣೆಯನ್ನು ತೊಲಗಿಸಬೇಕು. ನೋಡಿ ನಾನು ಆತನು ತರುವ ನೀರನ್ನೇ ಕುಡಿಯುವುದು ನನಗೆ ಏನೂ ಆಗಿಲ್ಲ. ನೀವು ನಿಮ್ಮ ಮನಸ್ಸು ಬದಲಾಯಿಸಿ ಕೊಳ್ಳದೆ ಹಾಗೆ ಸಂಪ್ರದಾಯವಾಗಿ ಇರುತ್ತೇವೆಂದರೆ ನಾನು ಹೆಚ್ಚಿಗೆ ಹೇಳಲು ಸಾಧ್ಯವಿಲ್ಲ. ಆತನು ನೀರು ಸೇದುತ್ತಾನೆ, ನೀವೂ ನೀರು ಸೇದಿ ಕೊಂಡು ಹೋಗಿ'' ಎಂದೆ. ಕೆಲವರು ಬೇರೆ ಕಡೆ ಹೋಗಿ ನೀರು ಸೇದಲು ಪ್ರಾರಂಭಿಸಿದರು. ಮೊದಲು ನಮ್ಮ ನಾಯಕರು ಪಾಲಿಸಬೇಕು. ಆಗ ಬದಲಾವಣೆ ಸಾಧ್ಯ ಎಂದರು ಅರಸು.

**ಪ್ರಶ್ನೆ :** ಈ ದೇಶದಲ್ಲಿ ಕ್ರಾಂತಿಯಾಗುತ್ತದೆಯೇ ?

**ಉತ್ತರ :** ಆ ಲಕ್ಷಣಗಳೇನೋ ಇನ್ನೂ ಕಾಣುತ್ತಿಲ್ಲ. ಕ್ರಾಂತಿಯ ವಾತಾವರಣವನ್ನು ನಾಶಮಾಡಲು ಸಾಕಷ್ಟು ಪಟ್ಟ ಭದ್ರ ಹಿತಾಸಕ್ತಿಗಳು ಕೆಲಸಮಾಡುತ್ತಿವೆ. ನನ್ನ ಕಾಲದಲ್ಲಂತೂ ಕ್ರಾಂತಿ ಕಾಣಲು ಸಾಧ್ಯವಿಲ್ಲ. ನಿಮ್ಮ ಪೀಳಿಗೆಯಲ್ಲಿ ಸಾಧ್ಯವಾಗಬಹುದೇನೋ ?

# ಸರಕಾರಿ ಕಣ್ಣಲ್ಲಿ ದಲಿತ ಮಹಿಳೆಯರ ಅತ್ಯಾಚಾರ !

ಹರಿಜನ ಗಿರಿಜನ ಮಹಿಳೆಯರ ಮೇಲೆ ರಾಷ್ಟ್ರದಲ್ಲಿ ಅತ್ಯಾಚಾರ ಹೆಚ್ಚುತ್ತಿರುವುದರ ಬಗ್ಗೆ ಕೇಂದ್ರ ಗೃಹ ಖಾತೆ ಆತಂಕಗೊಂಡಿದೆಯಂತೆ !

ಉತ್ತರಪ್ರದೇಶ, ಮಧ್ಯಪ್ರದೇಶ, ರಾಜಸ್ಥಾನ ಮತ್ತು ಬಿಹಾರ ರಾಜ್ಯಗಳು ಈ ದೌರ್ಜನ್ಯಕ್ಕೆ ಎತ್ತಿದ ಕೈ. ದಕ್ಷಿಣ ರಾಜ್ಯಗಳಲ್ಲಿ ಆಂದ್ರಪ್ರದೇಶದಲ್ಲಿ 1980-81ರನಡುವೆ ಹೆಚ್ಚು ಪುರುಷರ ... ಆಂಧ್ರಪ್ರದೇಶದಲ್ಲಿ ೧೯ ಹರಿಜನಮಹಿಳೆಯರು ... ಮಹಿಳೆಯರು ತುತ್ತಾಗಿದ್ದಾರೆ. ಕರ್ನಾಟಕದಲ್ಲಿ ಎಂಟು ಹರಿಜನ ಮಹಿಳೆಯರು ಮತ್ತು ಒಬ್ಬ ಗಿರಿಜನ ಮಹಿಳೆ ಅತ್ಯಾಚಾರಕ್ಕೆ ಒಳಗಾಗಿದ್ದಾರೆ. ಕೇರಳದಲ್ಲೂ ಅಷ್ಟೇ. ತಮಿಳುನಾಡಿನಲ್ಲಿ ಐವರು ಹರಿಜನರ ಮಹಿಳೆಯರಿಗೆ ಈ ಗತಿ ಒದಗಿದೆ.

ಮಹಿಳೆಯರ ಮೇಲೆ ಅತ್ಯಾಚಾರ ಉತ್ತರಪ್ರದೇಶ ಮತ್ತು ಮಧ್ಯಪ್ರದೇಶ ರಾಜ್ಯಗಳಲ್ಲಿ ಹೇರಳ. ೧೯೮೦ರ ಮೇ ತಿಂಗಳಿಂದ 1981ಏಪ್ರಿಲ್ ವೇಳೆಗೆ ಉತ್ತರಪ್ರದೇಶದಲ್ಲಿ ೧೪೯ ಮಹಿಳೆಯರು ಅತ್ಯಾಚಾರಕ್ಕೆ ಒಳಗಾಗಿದ್ದಾರೆ. ಮಧ್ಯಪ್ರದೇಶದಲ್ಲಿ ೧೦೧ ಹರಿಜನ ಮಹಿಳೆಯರು ಮತ್ತು ೧೨೦ ಗಿರಿಜನ ಮಹಿಳೆಯರ ಮೇಲೆ ಅತ್ಯಾಚಾರ ನಡೆದಿದೆ. ಬಿಹಾರದಲ್ಲಿ ಇಂಥವರ ಸಂಖ್ಯೆ ೭೯ ಮತ್ತು ೪೫. ರಾಜಸ್ಥಾನದಲ್ಲಿ ೭೪ ಮತ್ತು ೧೧.

ದುರ್ಬಲ ವರ್ಗ ಮಹಿಳೆಯರ ಮೇಲೆ ದೌರ್ಜನ್ಯ ಹೆಚ್ಚುತ್ತಿರುವ ಮತ್ತೊಂದು ರಾಜ್ಯವೆಂದರೆ ಮಹಾರಾಷ್ಟ್ರ. ಇಲ್ಲಿ ಕಳೆದ ಒಂದು ವರ್ಷದಲ್ಲಿ ೫೩ ಹರಿಜನ ಮಹಿಳೆಯರು ೨೫ ಗಿರಿಜನ ಮಹಿಳೆಯರು ಬಲಾತ್ಕಾರಕ್ಕೊಳಗಾಗಿದ್ದಾರೆ.

## 'ಗುಲ್ಬರ್ಗಾದಲ್ಲಿ "ಗ್ರಾಮೀಣ ಜನ ಜಾಗೃತಿ ಕಾರ್ಯಕ್ರಮ'

ಅಧಿಕಾರಿಗಳು, ಸವರ್ಣೀಯರು, ಶ್ರೀಮಂತರು ನಡೆಸುತ್ತಿರುವ ನಾನಾ ರೀತಿಯ ಮೋಸ, ಸುಲಿಗೆ, ಅಸ್ಪೃಶ್ಯತೆ, ದಬ್ಬಾಳಿಕೆಗಳ ವಿರುದ್ಧ ಹಳ್ಳಿಯ ಜನರಲ್ಲಿ ಜಾಗೃತಿ ಮೂಡಿಸಲು ದಲಿತ ಸಂಘರ್ಷ ಸಮಿತಿಯ ಗುಲ್ಬರ್ಗಾ ಶಾಖೆ "ಗ್ರಾಮೀಣ ಜನ ಜಾಗೃತಿ ಕಾರ್ಯಕ್ರಮ"ವನ್ನು ಹಾಕಿಕೊಂಡಿದೆ.

ಕಳೆದ ತಿಂಗಳು ಅಫ್‌ಜಲ್ಪುರ್ ತಾಲ್ಲೂಕಿನ ಎಲ್ಲಾ ಹಳ್ಳಿಗಳಲ್ಲಿ ಸಮಿತಿಯ ಕಾರ್ಯಕರ್ತರು ಹೋರಾಟದ ಹಾಡನ್ನು ಹೇಳುತ್ತಾ, ದಲಿತರನ್ನು ಮೋಸ ಮಾಡಿರುವ ರಾಜಕಾರಣಿಗಳ ಬಗ್ಗೆ ಎಚ್ಚರಿಕೆ ಕೊಡುತ್ತಾ ಸುತ್ತಾಡಿದ್ದಾರೆ. ಕಳೆದ ಜೂನ್ ೧೪ ರಂದು ಗೊಬ್ಬೂರು ಗ್ರಾಮದಲ್ಲಿ ಬಹಿರಂಗ ಸಭೆ ನಡೆಸುವ ಮೊದಲು ಶಾಸಕ ಎಂ. ವೈ. ಪಾಟೀಲರಿಗೆ ಘೇರಾವ್ ಮಾಡಲಾಯಿತು.

## ಲಿಂಗಸಗೂರ್ : ಭಾರೀ ಮೆರವಣಿಗೆ

ರಾಯಚೂರು ಜಿಲ್ಲೆಯ ಲಿಂಗಸೂಗೂರ್ ತಾಲ್ಲೂಕು ದಲಿತ ಸಂಘರ್ಷ ಸಮಿತಿ ಹಾಗೂ ದಲಿತ ವಿದ್ಯಾರ್ಥಿ ಒಕ್ಕೂಟ ಲಿಂಗಸೂಗೂರು ತಾಲ್ಲೂಕಿನ ವಿವಿಧ ಬೇಡಿಕೆಗಳಿಗೆ ಒತ್ತಾಯಿಸಿ ಜೂನ್ ೨೧ ರಂದು ಭಾರೀ ಮೆರವಣಿಗೆ ನಡೆಸಿದ್ದಾರೆ.

ತಾಲ್ಲೂಕು ಕೇಂದ್ರದಲ್ಲಿ ಪ್ರಥಮ ದರ್ಜೆ ಕಾಲೇಜು, ಹಟ್ಟಿ ಚಿನ್ನದ ಗಣಿಯಲ್ಲಿ ಆದಿರಿನ ಬಗ್ಗೆ ಡಿಪ್ಲೊಮೊ ತರಬೇತಿ ಮತ್ತು ಮುದಗಲ್ ಮತ್ತು ಹಟ್ಟಿಯಲ್ಲಿ ಜ್ಯೂನಿಯರ್ ಕಾಲೇಜುಗಳನ್ನು ಪ್ರಾರಂಭಿಸಬೇಕೆಂದು ಸಮಿತಿ ಒತ್ತಾಯಿಸಿದೆ. ತಾಲ್ಲೂಕಿನಲ್ಲಿ ದಲಿತ ವಿದ್ಯಾರ್ಥಿಗಳಿಗೆ ಸರಕಾರ ಸರಿಯಾಗಿ ಹಾಸ್ಟೆಲ್ ಒದಗಿಸಬೇಕೆಂದು ಸಮಿತಿ ಹೊರಡಿಸಿರುವ ಕರಪತ್ರದಲ್ಲಿ ತಿಳಿಸಿದೆ.

## ಎಡ-ಬಲ ಮರೆತು ಸಂಘಟನೆ

ಬೆಂಗಳೂರು ದಕ್ಷಿಣ ತಾಲ್ಲೂಕು, ಕೃಷ್ಣರಾಜಪುರದ ದಲಿತರ ಕೇರಿ ಎಡ-ಬಲ ಪಂಗಡಗಳನ್ನು ಮರೆತು ದಲಿತ ಸಂಘರ್ಷ ಸಮಿತಿಯ ಸಂಘಟನೆಯ ಹಾದಿ ಹಿಡಿದಿದೆ.

ಜೂನ್ 27ರಂದು ಕೇರಿಯಲ್ಲಿ ನಡೆದ ಸಭೆಯಲ್ಲಿ ದೇಶಾದ್ಯಂತ ಹರಿಜನರ ಮೇಲೆ ನಡೆಯುತ್ತಿರುವ ಕೊಲೆ, ಸುಲಿಗೆ, ಅತ್ಯಾಚಾರಗಳನು ಖಂಡಿಸಲಾಯಿತು. ಎಲ್ಲಾ ರೀತಿಯ ಭೇದಭಾವಗಳನ್ನು ಮರೆತು ದಲಿತರೆಲ್ಲರೂ ಒಂದಾಗಬೇಕೆಂದು ಕಾರ್ಯಕರ್ತರಾದ ರಾಜಕುಮಾರ್ ಕರೆಕೊಟ್ಟರು.

## "ದಲಿತರಿಗೂ ನನಗೂ ಸಂಭಂಧ ಇಲ್ಲ ಹೋಗ್....ಹೋಗ್ರಿ"...

ತಾ|| 4-7-82 ರಂದು "ಪಂಚಮ" ಪತ್ರಿಕೆಗೆ ವಾರ್ಷಿಕ ಚಂದಾದಾರರನ್ನು ಮಾಡಲು ಮಿತ್ರ ವರದಯ್ಯನವರ ಜೊತೆ ಮೈಸೂರಿನ ಮಾನಸಗಂಗೋತ್ರಿಯ ಅಧ್ಯಾಪಕರ ನಿವಾಸಗಳಿಗೆ ಭೇಟಿಕೊಡುತ್ತಿದ್ದೆವು.

ಅದೇ ದಿನ ದಲಿತ ಜನಾಂಗಕ್ಕೆ ಸೇರಿದ ಜೆ. ಸಿ. ಭೈರಯ್ಯನವರ ಮನೆಗೆ ಹೋದೆವು. ಭೈರಯ್ಯ ನಮ್ಮನ್ನು ಕಂಡವರೇ ಯಾರ್‍ರೀ ? ಎಂದರು. ನಾವು ದಲಿತ ಸಂಘರ್ಷ ಸಮಿತಿಯ ಕಾರ್ಯಕರ್ತರು........ಎನ್ನುತ್ತಿದ್ದಂತೆಯೇ ಭೈರಯ್ಯನವರ ಸೈನ್ಸ್ ಕಣ್ಣುಗಳು ಕೆಂಪಗಾದವು. "ನನಗೂ ದಲಿತರಿಗೂ ಸಂಬಂದವಿಲ್ಲ ಹೋಗ್ರಿ ಹೋಗ್ರಿ" ಎಂದರು.

ಭೈರಯ್ಯನವರಿಗೂ ದಲಿತರಿಗೂ ಸಂಬಂದವಿಲ್ಲದಿದ್ದರೂ ಪರವಾಗಿಲ್ಲ. ಭೈರಯ್ಯನ ಅಪ್ಪನವರ ಕಸದ ಮಂಕರಿಗೂ ಮತ್ತು ಭೈರಯ್ಯನವರಿಗೂ ಮೀಸಲಾತಿಗೂ ಸಂಭಂದವಿಲ್ಲವೆ ?

ಇದು ದಲಿತ ಬ್ರಾಹ್ಮಣ ಭೈರಯ್ಯನಿಗೆ ಗೊತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು !

—ಹೆಚ್' ಎಸ್' ರಾಜೇಂದ್ರ ಸಿಂಗ್'
ಹೆಗ್ಗಡದೇವನ ಕೋಟೆ.

## ತಿಪಟೂರು ಸುತ್ತ ಕೊಲೆಗಡುಕ ಚಂದ್ರಯ್ಯನ ಹಾವಳಿ

**ತಿಪಟೂರು ಪ್ರತಿನಿಧಿಯಿಂದ**

ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕು ಗಿಣಕಿಕೆರೆಯ ಕಲ್ಲೇಶಯ್ಯನ ಅಮಾನುಷ ಕಗ್ಗೊಲೆಯ ನೆನಪು ಗಿಣಕಿಕೆರೆಯ ದಲಿತರ ಕಣ್ಣುಗಳಲ್ಲಿ ತೇವವಾಗಿರುವಾಗಲೇ ಕೊಲೆಗಾರ ಚಂದ್ರಯ್ಯನ ದುಷ್ಟಕೂಟವು ಮೇ ೪ ರಂದು ಕಲ್ಲೇಶಯ್ಯನ ತಂದೆಯ ಕೊಲೆಗೆ ಪ್ರಯತ್ನ ನಡೆಸಿದೆ.

ಕಲ್ಲೇಶಯ್ಯನನ್ನು ಕೊಂದ ಚಂದ್ರಯ್ಯ ಅಂದು ತನ್ನ ದುಷ್ಟಕೂಟದ ಶಿವಣ್ಣ ಎಂಬುವವನೊಡನೆ ಸೇರಿ ಕರಡಾಳು ಸಂತೆ ಮುಗಿಸಿಕೊಂಡು ಬರುತ್ತಿದ್ದ ಕಲ್ಲೇಶಯ್ಯನ ತಂದೆ ಚಿಕ್ಕಯ್ಯನ ಕೊಲೆ ಮಾಡಲು ಹೋಗಿ ವಿಫಲನಾಗಿದ್ದಾನೆ. ಕಳೆದ ವರ್ಷ ಆಗಸ್ಟ್ ೧೬ ರಂದು ಕಲ್ಲೇಶಯ್ಯನನ್ನು ಕೊಂದ ಚಂದ್ರಯ್ಯನಿಗೆ ಜಾತೀವಾದಿ ಶ್ರೀಮಂತ, ತಾಯ್ಗಂಡರ ಬೆಂಬಲವೂ, ಸರ್ಕಾರದ ಹಾಗೂ ಪೋಲಿಸರ ಕುಮ್ಮಕ್ಕು ಸಿಕ್ಕಿರುವುದರಿಂದಲೇ ಈತ "ಗಿಣಕಿಕೆರೆಯ ದಲಿತರ ವಂಶವನ್ನೇ ನಿರ್ವಂಶ ಮಾಡ್ತೀನಿ" ಅಂತ ಹೇಳಿಕೊಂಡು ತಿರುಗುತ್ತಿದ್ದಾನೆ.

ಗಿಣಕಿಕೆರೆಯಲ್ಲಿ ಈಗಾಗಲೇ ಎರಡು ಕೊಲೆಗಳಾಗಿವೆ. ಕಲ್ಲೇಶಯ್ಯನ ಕೊಲೆ ಬಗ್ಗೆ ಸಾಕಷ್ಟು ಪುರಾವೆಗಳಿದ್ದರೂ ಸರ್ಕಾರ ಕೊಲೆಗಡುಕರ ಮೇಲೆ ಕ್ರಮ ಜರುಗಿಸದಿದ್ದುದರ ವಿರುದ್ಧ ಕರ್ನಾಟಕ ದಲಿತ ಸಂಘರ್ಷ ಸಮಿತಿ ಈಗಾಗಲೇ ಕರಪತ್ರ, ಮೆರವಣಿಗೆ, ಬಹಿರಂಗ ಸಭೆಗಳ ಮೂಲಕ ಪ್ರತಿಭಟಿಸಿದೆ. ಸಂಬಂಧಿಸಿದ ಅಧಿಕಾರಿಗಳು ಕೊಲೆಗಡುಕರ ಬಗ್ಗೆ ಕಣ್ಣು ಮುಚ್ಚಿ ಕುಳಿತಿದ್ದಾರೆ. ಕಲ್ಲೇಶಯ್ಯನ ತಂದೆಯ ಪ್ರಾಣಕ್ಕೆ ಕುತ್ತು ಬರುವ ಮುನ್ನ ಪೋಲಿಸರು ಮತ್ತು ಅಧಿಕಾರಿಗಳು ಕಣ್ಣು ಮುಚ್ಚಿ ಎಂಜಲು ಕಾಸಿಗೆ ಜೊಲ್ಲು ಸುರಿಸುವುದನ್ನು ನಿಲ್ಲಿಸಿಬಿಡಬೇಕೆಂದು ತಿಪಟೂರು ಶಾಖೆ ಎಚ್ಚರಿಸಿದೆ. ಕೊಲೆಗಡುಕ ಚಂದ್ರಯ್ಯನ ಮೇಲೆ ಕೂಡಲೇ ಕ್ರಮ ಕೈಗೊಳ್ಳಬೇಕೆಂದು ಒತ್ತಾಯಿಸಲಾಗಿದೆ.

## ಸಮಾಜ ಸೇವಕನ ಸನ್ಮಾನಕ್ಕೆ ಹೋರಾಟದ ಹಾಡಿನ ರಂಜನೆ

ಚಾಮರಾಜನಗರ ತಾಲ್ಲೂಕು ಕಾಗಲವಾಡಿ ಗ್ರಾಮದಲ್ಲಿ ಜುಲೈ ೧೧ ರಂದು ಕೆ. ಸಿ. ರಂಗಯ್ಯನವರಿಗೆ ಸನ್ಮಾನ ಸಮಾರಂಭ ಏರ್ಪಡಿಸಲಾಗಿತ್ತು. ಇದೇ ಗ್ರಾಮದ ಬಡ ದಲಿತ ಜನಾಂಗದ ಕುಟುಂಬವೊಂದರಲ್ಲಿ ಜನಿಸಿದ ಕೆ. ಸಿ. ಆರ್. ತಾಲ್ಲೂಕಿನ ಜನಾಂಗದ ಸಮಸ್ಯೆಗಳಿಗೆ ಪರಿಹಾರ ಒದಗಿಸುವುದೂ ; ವಿದ್ಯೆಯ ಮುಖಾಂತರ ಜನತೆಯಲ್ಲಿ ಅಪಾರವಾಗಿ ಪ್ರಜ್ಞೆ ಮೂಡಿಸುವಂಥ ಜವಾಬ್ದಾರಿಯುತ ಕೆಲಸಮಾಡಿರುವುದನ್ನು—ಸಭೆಯಲ್ಲಿ ಮಾತಾಡಿದ ಎಂ.ಎಲ್.ಎ. ಮಾದಯ್ಯ, ತಾಲ್ಲುಕು ಮಂಡಳಿ ಅಧ್ಯಕ್ಷ ಶ್ರೀ ಬಸಣ್ಣ, ವೈದ್ಯಾಧಿಕಾರಿಣಿ ಡಾ. ಕಮಲಮ್ಮ, ಶ್ರೀ ಕೆಂಪಯ್ಯ ಹಾಗೂ ಶ್ರೀ ದೇವಯ್ಯ ಹರವೆ ಅವರುಗಳು ಪ್ರಚುರಪಡಿಸಿದರು.

ಕಿಕ್ಕಿರಿದು ಸೇರಿದ್ದ ಜನತೆ ಕೆ. ಸಿ. ಆರ್ ಅವರಿಗೆ ಬಹುರೀತಿ ಗೌರವ ತೋರಿದರು. ಈ ಜನಸ್ತೋಮವನ್ನು ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಕಾರ್ಯಕರ್ತರು ಹೋರಾಟದ ಹಾಡುಗಳು ಹೇಳುವುದರೊಂದಿಗೆ ಮತ್ತು 'ಹೆಜ್ಜೆ' ನಾಟಕ ಆಡಿ ತೋರಿಸುವುದರ ಮುಖಾತರ ರಂಜಿಸಿತು.

ಅನುಭವದ ಗಣಿಯಿಂದ

# ದೇವರು ಕೊಟ್ಟ ಹೊಲೆತನದ ವರ!

ಇ. ಶ್ರೀನಿವಾಸಯ್ಯ ಬಂಗವಾದಿ

ನಾನೊಬ್ಬ ಕೂಲಿಮಾಡುವ ದಲಿತ. ಒಬ್ಬ ಸವರ್ಣೀಯನು ತೋಡಿಸುವ ಬಾವಿಗೆ ದಲಿತರೆಲ್ಲಾ ಕೂಲಿಗೆ ಹೋಗುತ್ತಿದ್ದೆವು. ಅಲ್ಲಿ ಆದ ಒಂದು ಅನುಭವವನ್ನು ತಿಳಿಸಲು ಆಸೆಯಾಗುತ್ತದೆ.

ಶ್ರೀನಿವಾಸಪುರ ತಾಲೂಕ್ ಬೂರಗನಹಳ್ಳಿ ಕೆರೆಯ ಪಕ್ಕದಲ್ಲಿ ಒಂದು ಬಾವಿ ತೋಡಿಸುತ್ತಿದ್ದ ಆ ಊರಿನ ಗೌಡ. ಅದರಲ್ಲಿ ನೀರು ಬಂತು. ಆ ಬಾವಿಗೆ ಕೆಲಸಕ್ಕೆ ಹೋಗ್ತಾ ಇದ್ದೆ, ಅದರಂತೆ ಆ ಊರಿನ ಸವರ್ಣೀಯರೂ ಬರುತ್ತಾ ಇದ್ದರು. ಆ ಗೌಡ 'ನನ್ನ ಗಂಗಮ್ಮ ನೀರು ಕೊಟ್ಟಿದ್ದಾಳೆ ಅದಕ್ಕೆ ಪೂಜೆ ಮಾಡಬೇಕು ಕುರಿ ಹೊಡೆಯಬೇಕು 'ಎಂದು ನಮ್ಮೂರಿನ ದಲಿತರಿಗೆ ಹೇಳಿದರು. ಅದರಂತೆ ಆ ದಿವಸಕ್ಕೆ ಕುರಿತಂದ. ದೇವರಿಗಾಗಿ ನಾನೆ ಆ ಕಡೆ ಓಡಾಡಿ ದೇವರುಗಳ ತಂದೆ. ಹಣಿಕಿಲು ಸೊಪ್ಪುತಂದು ಗುಡಿಕಟ್ಟಿದೆ. ಎಲ್ಲಾ ಕೆಲಸ ಮಾಡಿದೆ. ಗೌಡ ಬಂದು ಈಗ ರಾಹುಕಾಲ ಇನ್ನು ೩ಗಂಟೆಗೆ ಪೂಜೆಮಾಡಿ ಎಂದು ಹೇಳಿದರು. ಗೌಡನ ಮಾತನ್ನು ಕೇಳಿ ಎಲ್ಲರೂ ಸುಮ್ಮನಾದರು.

ಆದರೆ ನಾನು "ಯಾವ ಕಾಲನೂ ಇಲ್ಲ [illegible]ಗಲು ಇರೋ ಕಾಲನೆ ಈಗ ಇದೆ, ಹೊಡಿರಿ ನಾನು ಎಲ್ಲಿಗೂ ಹೋಗಬೇಕು" [illegible] ಅಲ್ಲಿ ಇದ್ದವರೆಲ್ಲಾ ನನ್ನ ಮೇಲೆ ರೇಗಾಡಿದರು. 'ಏನೋ [illegible] ಹೇಳ್ತ ಕಣೋ ಯಾವರ [illegible] ನೋಡುತ್ತಾರೆ' ಎಂದರು. ೩ಗಂಟೆಗೆ ಆ ಊರಿನ ಗೌಡರ ಹುಡುಗ ಬಂದು ಕೈಕಾಲು ತೊಳೆದುಕೊಂಡು ಪೂಜೆಮಾಡಿದ. ಕುರಿಗೆ ನೀರು ಹಾಕಿದರು. ಅದು ವರ ಕೊಡಲಿಲ್ಲ. ಎಲ್ಲ ಗೌಡರು, ದಲಿತರು 'ಅಮ್ಮಾ ತಾಯಿ ಏಕೆ ಅನುಮಾನಿಸುತೀಯಾ ನಿನಗೆ ಏನು ಅನ್ಯಾಯ ಮಾಡಿದೀವಿ ಅಮ್ಮಾ' ಮತ್ತೊಬ್ಬರು ಅಮ್ಮ ನಿನಗೆ ತಿಳಿಯದ್ದು ಏನು ಆದೆ ಬೇಗ ವರಕೊಡು' ಎಂದರು. ಅದು ಕೊಡಲಿಲ್ಲ. ಮತ್ತೆ ಒಂದು ಚೆಂಬು ನೀರು ಸುರಿದರು. ಕೊಡಲಿಲ್ಲ! ಮತ್ತೆ ಮತ್ತೊಬ್ಬ ಗೌಡ ದಿಢೀರ್‌ನೆ ಕೈಕಾಲು ತೊಳೆದು ಪೂಜೆ ಮಾಡಿ ಊನಕಡ್ಡಿ ತೋರಿಸಿ ಒಂದು ಚೆಂಬು ನೀರುಹಾಕಿದ ಕುರಿ ಮೇಲೆ. ಆಗಲೂ ಸಹ ವರ ಕೊಡಲಿಲ್ಲ. ಆಗ ಮತ್ತೊಮ್ಮೆ ಅಮ್ಮ ತಾಯಿ ನಿನಗೆ ಏನು ಸಾಲದು ಏನು ಕಡಿಮೆ ಬೇಗ ವರ ಕೊಡು ಅಂದ. ಅದಕ್ಕೆ ಬಾಯಿ ಮಾತಿಲ್ಲ ಎಂದೆ. ಎಲ್ಲರೂ ನನ್ನ ದುರುಗುಟ್ಟಿನೋಡಿದರು. ನನ್ನ ತಂದೆಯೇ ನನ್ನ ಬಡಿಯುವ ರೀತಿ ಬಂದ. "ತಲೆಯಲ್ಲಿ ನಡೆಯ ಬ್ಯಾಡಲೋ. ಜಾಸ್ತಿ ಗಲಾಟೆ ಮಾಡಿದರೆ ಗೌಡರ ಕೈಯಲ್ಲಿ ಹೊಡೆಸುತೀನಿ" ಅಂದ ನಾನು ಸುಮ್ಮನಾದೆ.

ಈ ಗಂಗಮ್ಮ ತಾಯಿ ವರ ಕೊಡದಿದ್ದರೆ ಎಲ್ಲಿ ಗಡ್ಡೆ ಬೀಳುವುದೋ, ಎಂಬ ಭಯ ಗೌಡನಿಗೆ, ಮತ್ತು ಮಾಂಸದ ಆಸೆಯುಳ್ಳ ಕೂಲಿಯವರಿಗೆ ತಟ್ಟನೆ ಆ ದಿನವೇ ನಮ್ಮ ಅತ್ತಿಗೆ ಸತ್ತದ್ದು ನೆನಪಿಗೆ ಬಂತು. ಅದ್ದರಿಂದ ಗೌಡನು ನಿಮ್ಮ ಅತ್ತಿಗೆ ಸತ್ತಿದ್ದಾಳೆ ಅದ್ದರಿಂದ ನಿನಗೆ ಹೊಲೆಯಾಗಿದೆ ಬಾವಿಯ ಒಳಗೆ ಬರಕೂಡದು. ಆದರೆ ನಾನು ಒಳಗಡೆನೇ ಇದ್ದೆ. ಆಗ ನನ್ನ ತಂದೆ ನನ್ನನ್ನು ಕರೆದು ನಮಗೆ ಹೊಲೆ ಇದೆ ಅದಕ್ಕೆ ಗಂಗಮ್ಮ ವರ ಕೊಡಲಿಲ್ಲ ಹೋಗೋಣ ಬಾ ಎಂದರು. ಆದಕ್ಕೆ ನಾನು ಬರೋದಿಲ್ಲ ಯಾಕೆ ವರ ಕೊಡದಿಲ್ಲ ನೋಡತಿನಿ ಎಂದೆ. ನಮ್ಮ ತಂದೆ ಗೌಡನ ಕೈಯಲ್ಲಿ ಒದಸ್ತೀನಿ ಎಂದರು. ನಾನು ನೀವು ಆ ಕುರಿನ ಆ ನೀರಿನ ಗುಣಿಯಲ್ಲಿ ಮುಳುಗಿಸಿ ಆಮೇಲೆ ವರಕೊಡುತ್ತದೆ ಎಂದೆ. ಎಲ್ಲರೂ ನನ್ನ ನೋಡಿ ನಿನ್ನದ್ದು ಎಕ್ ಚೆಕ್ ಮಾತು, ಎಷ್ಟು ಅಹಂಕಾರ ನಿನಗೆ ಎಂದರು. ಅದರಂತೆ ಇನ್ನೊಬ್ಬ ಗೌಡನು ಬಂದು ಎರಡು ತಂಬಿಗೆ ನೀರು ಸುರಿದ. ಆ ಕುರಿಯ ಚಳಿಗೆ ತಾಳಲಾರದೆ ಭಯದಿಂದ ತನ್ನ ಮೈಯನ್ನು ಒದರಿತು. ಅದಕ್ಕೆ ತಾಯಿ ವರ ಕೊಟ್ಟಳೆಂದು ಮಚ್ಚಿನಿಂದ ಒಂದೇ ಏಟಿಗೆ ಅಲೋಲೋ ಕಿಲಲೋ ಎಂದು ಕೂಗಿ ಕತ್ತನ್ನು ಕತ್ತರಿಸಿದರು.

ಇಷ್ಟೆಲ್ಲಾ ದಲಿತರೂ ಕಷ್ಟಪಟ್ಟು ಬಾವಿ ತೆಗೆಯುವುದಕ್ಕೆ ಕೆಲಸ ಮಾಡಿದರೂ ಆ ಕುರಿಯನ್ನು ಮುಟ್ಟಲಿಲ್ಲ, ಕಾರಣ ಹೊಲೆಯಾಗಿತ್ತು. ಹೊಲೆಯಾಗಿದ್ದುದು ಗೌಡನ! ಮತ್ತು ಸವರ್ಣೀಯ ಕೂಲಿಗಳ ಮನಸು ಎನಿಸುತ್ತಿತು ನನಗೆ.

## ನ್ಯಾಯಕ್ಕಾಗಿ ಬೀದಿಗಿಳಿದ ದಕ್ಷಿಣ ಕನ್ನಡ ದಲಿತರು

(ವರದಿ—ಜಿ. ಸೋಮಶೇಖರ್)

ಕರ್ನಾಟಕ ದಲಿತ ಸಂಘರ್ಷ ಸಮಿತಿಯು ಆಶ್ರಯದಲ್ಲಿ [illegible]ತ್ತಿರುವ ದಕ್ಷಿಣ ಕನ್ನಡ ಜಿಲ್ಲೆಯ ದಲಿತರು ಜೂನ್ 19 ರಂದು ಮೊದಲ ಬಾರಿಗೆ ಬೀದಿಗಿಳಿದು ತಮ್ಮ ಮೇಲೆ ನಡೆಯುತ್ತಿರುವ ಅನ್ಯಾಯಗಳ ವಿರುದ್ಧ ಪ್ರತಿಭಟನೆ ನಡೆಸಿದ್ದಾರೆ.

ದಲಿತರ ಬಗ್ಗೆ [illegible] ನಿರ್ಲಕ್ಷ್ಯದ ವಿರುದ್ಧ [illegible] ಜಿಲ್ಲಾಧಿಕಾರಿಯ [illegible] ವಿರುದ್ಧ, [illegible] ತಮ್ಮ ಎಲ್ಲಾ ಬೇಡಿಕೆಗಳಿಗೆ ಒತ್ತಾಯಿಸಿ, ಜೂನ್ 19 ರಂದು ಜಿಲ್ಲಾಧಿಕಾರಿಯ ಕಛೇರಿ ಎದುರಿಗೆ ಸಾಂಕೇತಿಕ [illegible] ನಡೆಸಲಾಯ್ತು.

ಮಂಗಳೂರು ತಾ॥ ಸುರತ್ಕಲ್ ಫಿರ್ಕಾ ಕೆಂಜಾರು ಗ್ರಾಮದ ಪೇಜಾವರ ಕಾಲೋನಿಯ ಬಡದಲಿತರು ಮನೆಕಟ್ಟಿಕೊಳ್ಳಲು ತುಂಡು ಜಾಗಕ್ಕಾಗಿ 5–6 ವರ್ಷಗಳಿಂದ ಅರ್ಜಿ ಸಲ್ಲಿಸುತ್ತಾ ಬಂದಿದ್ದರೂ ಅಧಿಕಾರಿಗಳ ಕಣ್ಣುಗಳಿಗೆ ಅರ್ಜಿಯೇ [illegible] ಸುಮಾರು 40 ಮಂದಿ ದಲಿತರು ಕೈಯ್ಯಲ್ಲಿ ಅರ್ಜಿ ಹಿಡಿದುಕೊಂಡು ಜಿಲ್ಲಾಧಿಕಾರಿಯನ್ನು ಭೇಟಿಯಾದಾಗ "ಇನ್ನೊಂದು ತಿಂಗಳಲ್ಲಿ ಮಾಡಿಸಿಕೊಡ್ತೀನಿ" ಎಂದು ಹೇಳಿದ ಜಿಲ್ಲಾಧಿಕಾರಿ ತಮ್ಮ ಮಾತಿನಂತೆ ತಿಂಗಳು ಕಳೆದರೂ ನಡೆದುಕೊಳ್ಳಲಿಲ್ಲ. ಸ್ಥಳೀಯ ಪಂಚಾಯ್ತಿಯವರು ಸರ್ಕಾರಿ ಜಮೀನು 176–1ಬಿ, 177-ಬಿ ಜಮೀನುಗಳನ್ನು ದಲಿತರಿಗೆ ಕೊಡಬಹುದೆಂದು ತೀರ್ಮಾನ ಮಾಡಿದ್ದರೂ, ಅದು ದಲಿತರ ಕೈಗೆ ಮನೆ ಕಟ್ಟಿಕೊಳ್ಳಲು ಸಿಗುವುದರ ಬದಲು ಅದರಲ್ಲಿ ಒಂದು ಎಕರೆ ಸವರ್ಣೀಯರ ಹೆಣ ಹೂಣಲು ಸ್ಮಶಾನವಾಗಿ ಮಂಜೂರಾಯಿತು.

ಹೋರಾಟದ ಹಾಡುಗಳೊಂದಿಗೆ ಜೂನ್ 19 ರಂದು ನ್ಯಾಯಕ್ಕಾಗಿ ಒತ್ತಾಯಿಸಲಾಯಿತು.

# ಸ್ವಾಭಿಮಾನಿ ದಲಿತರ ಮೇಲೆ ಸಾಮಾಜಿಕ ಬಹಿಷ್ಕಾರ!

(ಮೊದಲ ಪುಟದಿಂದ)

ವಾದಿಗಳು, ಬ್ರಿಟಿಷರ ವಿರುದ್ಧ ಹೋರಾಟದಲ್ಲಿ ಅಸಮಾನತೆಯಂಥ ನಡುಗಡ್ಡೆಗಳು ಕೊಚ್ಚಿ ಹೋಗುತ್ತವೆ ಎಂದು ಭಾವಿಸಿದ್ದರು. ಆದರೆ ಪರಿಣಾಮ ಹಾಗಾಗಲಿಲ್ಲ. ಭಾರತಕ್ಕೆ ಸ್ವಾತಂತ್ರ್ಯ ಬಂದು ಕಾಲು ಶತಮಾನ ಕಳೆದಿದ್ದರೂ ಅಸ್ಪೃಶ್ಯರ ಸ್ವಾತಂತ್ರ್ಯ ಗಗನ ಕುಸುಮವಾಗಿಯೇ ಉಳಿದಿದೆ. ದೇಶದ 20 ಕೋಟಿ ಅಸ್ಪೃಶ್ಯರು ಎರಡನೆ ದರ್ಜೆ ಪ್ರಜೆಗಳಾಗಿ ಬದುಕುತ್ತಿರುವುದು ಯಾವ ನಾಗರೀಕ ಸಮಾಜಕ್ಕೂ ಗೌರವ ತರುವ ವಿಷಯವಲ್ಲ. ಮನುಷ್ಯತ್ವ, ವ್ಯಕ್ತಿ ಸಮಾನತೆ ಇವುಗಳಲ್ಲಿ ನಂಬಿಕೆಯಿರುವ ಯಾವೊಬ್ಬನೂ ನಾಚಿಕೆಯಿಂದ ತಲೆ ತಗ್ಗಿಸಬೇಕಾದ ವಿಚಾರಗಳು ಇವು.

ಪ್ರಜಾವಾಣಿ ಪತ್ರಿಕೆಯವರು ರೈತಚಳುವಳಿ ಅಧ್ಯಯನಕ್ಕಾಗಿ ಒಂದು ತಂಡ ಕಳಿಸಿದ್ದರು. ಅವರೊಟ್ಟಿಗೆ ನಾನು ಒಂದೆರಡು ದಿನ ಕೆಲಸಮಾಡಿದೆ. ಭದ್ರಾವತಿ ತಾಲ್ಲೂಕು ಅರಬಿಳಿಚಿ ಎಂಬ ಗ್ರಾಮವನ್ನು ನಾವು ತಲುಪಿದಾಗ ಸಂಜೆ 6_30 ಗಂಟೆ. ನಿಧಾನವಾಗಿ ಕತ್ತಲು ಕವಿಯುತ್ತಿತ್ತು. ಹೋಟೆಲೊಂದಕ್ಕೆ ಕಾಫಿಯನ್ನು ಕುಡಿಯಲು ಹೋದಾಗ, ಅಲ್ಲಿ ಕೆಲವು ಜನ ಹೊರಗೆ ನಿಂತಿದ್ದರು. ಮೈಮುರಿಯ ದುಡಿದು ಅವರ ಬಟ್ಟೆ ಕೊಳಕಾಗಿದ್ದವು. ಹೊಟೆಲ್ ಹೊರಗೆ ತೆಂಗಿನ ಚಿಪ್ಪಿನಲ್ಲಿ ಅವರು ಚಹ ಕುಡಿಯುತ್ತಿದ್ದರು. ಆ ಊರಿನ ಯಾವ ದೇವಸ್ಥಾನ, ಹೋಟೆಲ್, ಅಂಗಡಿಗಳಲ್ಲಿ ಅವರಿಗೆ ಪ್ರವೇಶವಿಲ್ಲ. ಅಸ್ಪೃಶ್ಯರಾದ ಅವರು ಊರ ಹೊರಗೆ ಬದುಕಿ ರೈತರ ಮನೆಗಳ ಜೀತದಾಳುಗಳಾಗಿರುವುದನ್ನು ಕಂಡು, "ಈ ದೇಶದಲ್ಲಿ ಎಷ್ಟು ರೈತಚಳುವಳಿಗಳು ನಡೆದರೆ ತಾನೇ ಏನು ?" ಎನ್ನಿಸಿತು ನನಗೆ.

ಬೀದರ್ ಜಿಲ್ಲೆ ಬಸವಕಲ್ಯಾಣ ತಾಲ್ಲೂಕು ಅಲಗೂಡು ಸಾಮಾಜಿಕ ಬಹಿಷ್ಕಾರ ಪ್ರಕರಣದ ನಂತರ, ದ. ಸಂ. ಸ. ಗುಲಬರ್ಗಾ ಜಿಲ್ಲಾ ಆಳಂದ ತಾಲ್ಲೂಕು ಬಟ್ಟರಗಾ ಗ್ರಾಮದ ಸಾಮಾಜಿಕ ಬಹಿಷ್ಕಾರ ಹೋರಾಟವನ್ನು ಎತ್ತಿಕೊಂಡಿದೆ.

ಎಲ್ಲೆಲ್ಲಿ ದಲಿತರು ಸ್ವಾಭಿಮಾನ, ಆತ್ಮಗೌರವ ಪ್ರದರ್ಶಿಸುತ್ತಾರೊ, ಅಲ್ಲೆಲ್ಲ ಸವರ್ಣೀಯರು ಅವರ ಮೇಲೆ ಹಲ್ಲೆ, ದೌರ್ಜನ್ಯ, ಸಾಮಾಜಿಕ ಬಹಿಷ್ಕಾರಗಳಂಥ ಕ್ರೂರ ಪದ್ಧತಿಗಳನ್ನು ಹೇರಿ, ಅವರ ಸ್ವಾಭಿಮಾನಗಳನ್ನು ಬಗ್ಗು ಬಡಿಯುತ್ತಿದ್ದಾರೆ. ಅಸ್ಪೃಶ್ಯರು ಯಾವತ್ತೂ ತಮ್ಮ ಹೊಲಗದ್ದೆಗಳಲ್ಲಿ ಜೀತದಾಳುಗಳಾಗಿ ಬದುಕಬೇಕು ಎಂಬುದೇ ಅವರ ಉದ್ದೇಶ. ತಾ॥ 6-6-82 ರಂದು ಕಾರಹುಣ್ಣಿಮೆಯ ದಿನ ಬಟ್ಟರಗಾ ಗ್ರಾಮದಲ್ಲಿ ಅಂಥ ಘಟನೆಯೊಂದು ಸವರ್ಣೀಯ ಮತ್ತು ದಲಿತರ ಮಧ್ಯೆ ನಡೆಯಿತು. ಇದರ ಪರಿಣಾಮ ಊರಿನ ಮೇಲು ಜಾತಿಯವರೆಲ್ಲ ಕೂಡಿ ಭೂರಹಿತ ಕೃಷಿ ಕಾರ್ಮಿಕರಾದ ಅಸ್ಪೃಶ್ಯರನ್ನು ಯಾವ ಕೆಲಸಕ್ಕೂ ಕರೆಯಕೂಡದೆಂದು ಕಟ್ಟುಮಾಡಿದ್ದಾರೆ. ಕೂಲಿ ಕೆಲಸದಿಂದಲೇ ಬದುಕುವ ಅವರಿಗೆ ಹೊಟ್ಟೆಗಿಲ್ಲದಾಗಿದೆ. ಬಹಿಷ್ಕಾರದ ಹೆಸರಿನಲ್ಲಿ ಮೇಲುವರ್ಗದವರು ತಮ್ಮ ಮನೆಗಳಲ್ಲಿ ಜೀತ ಅರೆಜೀತದಾಳುಗಳಾಗಿ ದುಡಿಯುತ್ತಿದ್ದ ದಲಿತರನ್ನು ಮನೆಗೆ ಕಳಿಸಿರುವುದು ಸಂತಸದ ಸಂಗತಿ

**ಬಿ. ಕೃಷ್ಣಪ್ಪ**

ಯಾದರೂ ಬೇರೆ ಆರ್ಥಿಕ ವ್ಯವಸ್ಥೆ ಅವರಿಗೆ ಇಲ್ಲದಿರುವುದರಿಂದ ಬಿಡುಗಡೆಯೆ ಅವರಿಗೆ ಹಿಂಸೆಯಾಗಿ ಪರಿಣಮಿಸಿದೆ. ಭೂಹೀನರಿಗೆ ಭೂಮಿ, ಕೂಲಿಕಾರರಿಗೆ ಶಾಶ್ವತ ಕಾಮಗಾರಿ, ಇಲ್ಲವೆ ನಿರುದ್ಯೋಗ ಭತ್ಯಗಳಂತಹ ಪರ್ಯಾಯ ಯೋಜನೆಗಳನ್ನು ಸರ್ಕಾರ ಮಾಡುತ್ತಿದ್ದರೆ ಅಸ್ಪೃಶ್ಯರು ಇಂಥ ಬಹಿಷ್ಕಾರಗಳಿಗೆ ಬೆದರುವ ಅಗತ್ಯ ಇರುತ್ತಿದ್ದಿಲ್ಲ. ಇಂಥ ಪ್ರಸಂಗಗಳು ದಲಿತರನ್ನು ಉದ್ಧಾರ ಮಾಡುವಂಥ ಯಾವ ಸಮಗ್ರ ಯೋಜನೆಗಳು ಸರ್ಕಾರದಲ್ಲಿ ಇಲ್ಲ ಎಂಬುದನ್ನು ತಿಳಿಸುತ್ತವೆ. ಕಾಂಗ್ರೆಸ್-ಇಂದಿರಾಗಾಂಧಿ ತಮ್ಮ ಉದ್ಧಾರಕಿ ಎಂದು ದೆಹಲಿಯ ಕಡೆಗೆ ಕೈಚಾಚಿ ಕುಳಿತಿರುವ ಅಸ್ಪೃಶ್ಯರು ಇನ್ನಾರೂ ಇಂಥ ಭ್ರಮೆಗಳಿಂದ ಹೊರಬರಬೇಕು.

ಬಟ್ಟರಗಾ ಗ್ರಾಮದ ಮೇಲುಜಾತಿಯವರು ಅಸ್ಪೃಶ್ಯರ ಮೇಲೆ ಪ್ರಯೋಗಿಸಿದ ಅಸ್ತ್ರ ಇದೊಂದೇ ಅಲ್ಲ. ತಾ॥ 18-6-82 ರಂದು ಊರಿನ ಮುಖಂಡರಾದ ಬಾಪುರಾವ್ ಮತ್ತು ದಳಪತಿ ಸುಬ್ಬರಾವ್ ಇವರ ನೇತೃತ್ವದಲ್ಲಿ ಮತ್ತೆ ಕೆಲವು ಕ್ರಮಗಳನ್ನು ಕೈಕೊಂಡರು.

ಯಾವ ಕಿರಾಣಿ ಅಂಗಡಿಯಲ್ಲೂ ದಲಿತರಿಗೆ
ಸಾಮಾನುಗಳನ್ನು ಕೊಡಕೂಡದು. ಇದುವರೆ
ಪ್ರತ್ಯೇಕ ಸ್ಥಳ ಮತ್ತು ಕಪ್ಪುಗಳಲ್ಲಿ ಚಹಾ
ಯುತ್ತಿದ್ದ ಅವರನ್ನು ಚಹಾ ಅಂಗಡಿಗಳ ಹ
ಬಿಟ್ಟುಕೊಳ್ಳಕೂಡದು. ಹಿಟ್ಟಿನ ಗಿರಣಿಗ
ಜೋಳ ಬೀಸಕೂಡದು. ಬೋರ್‌ವೆಲ್‌ನಿ
ಕುಡಿಯುವ ನೀರು ಕೊಡಬಾರದು. ಇ
ವ್ಯವಸ್ಥೆಯ ಉಸ್ತುವಾರಿಯನ್ನು ಗೂಂಡಾ
ಒಂದು ಗುಂಪಿಗೆ ವಹಿಸಿಕೊಡಲಾಯಿತು.
ರ್ಣೀಯರ ಈ ಮಾದರಿ ಹಿಂಸೆ ಇತಿಹಾಸ
ಆಗಿಹೋದ ಹೂಣ ಮತ್ತು ಟರ್ಕರ ನೆನಪ
ಮರುಕಳಿಸುತ್ತದೆ.

ಈ ಬಟ್ಟರಗಾ ಅಸ್ಪೃಶ್ಯರಿಗೆ ಉಳಿದಿರುವ
ಎರಡು ಮಾರ್ಗ. ಒಂದು ಅತಿ ಸುಲಭ ಮ
ಸರಳವಾದ ಮಾರ್ಗ. ಅಸ್ಪೃಶ್ಯರೆಲ್ಲ ಸವ
ಯರ ದಬ್ಬಾಳಿಕೆಗೆ ಬಗ್ಗಿ ಅವರ ಜೀತದ
ಗಳಾಗಿ ಹಿಂದಿನಂತೆ ಬದುಕುವುದು. ಮತ್ತೊಂ
ಬದುಕಲು ಬೇರೆ ಮಾರ್ಗಗಳನ್ನು ಹುಡುಕಿಕೊ
ಗುಲಾಮಗಿರಿ ಪದ್ಧತಿಗಳ ವಿರುದ್ಧ ಹೋರಾ
ವುದು. ದಲಿತರು ಮನುಷ್ಯರಾಗಿ ತಾ
ಬದುಕಬೇಕೆಂದರೆ ಈ ಮಾರ್ಗ ಕಷ್ಟವಾದ
ಅನಿವಾರ್ಯ.

ಈ ರೀತಿ ಹೋರಾಟಗಳಲ್ಲಿ ದಲಿತರು ತ
ಬಲಾಬಲಗಳನ್ನು ಖಚಿತ ಮಾಡಿಕೊ
ಬೇಕು. ಮೇಲು ವರ್ಗದವರ ಹತ್ತಿರ ಭೂ
ಎತ್ತು-ನೇಗಿಲು ಇವೆ. ಆದರೆ ಮುಖ್ಯ
ನೇಗಿಲನ್ನು ಚಲಿಸಬಲ್ಲಂಥ ಕೈಗಳು (ಶ್ರಮ
ಅವರ ಹತ್ತಿರ ಇಲ್ಲ. ದಲಿತರ ಹತ್ತಿರ ಉ
ಕೈಗಳು ಇವೆ. ದಲಿತರು ಭೂಮಿಯಲ್ಲಿ ಬೆ
ಸುರಿಸದೆ. ಭೂಮಿ ಬೆಳೆಯದು. ಇದನ್ನು ಶ್ರ
ಜೀವಿಗಳು ಮನವರಿಕೆ ಮಾಡಿಕೊಳ್ಳಬೇ
ಶ್ರೀಮಂತರು ಜೀತ, ಅರೆಜೀತ ಇವುಗಳಿಂದ
ಷ್ಕಾರ ಹಾಕಿದರೆ, ದಲಿತರೂ ಹೆಚ್ಚು ಕ
ಕೊಡದೆ, ವ್ಯಕ್ತಿ ಗೌರವವಿಲ್ಲದೆ, ಹೊಲಗ
ದುಡಿಯುವುದಿಲ್ಲ ಎಂದು ಸಂಘಟಿತರಾಗಿ
ಸವಾಲು ಒಡ್ಡಬೇಕು. ಮೇಲು ವರ್ಗ
ರಿಂದಲೇ ತಮ್ಮ ಜೀವಮಾನ ಎಂಬ ತಪ್ಪು
ವಳಿಕೆಯನ್ನು ಬಿಟ್ಟು, ತಾವಿಲ್ಲದೆ ಮೇಲು
ದವರ ಬಂಡವಾಳ ನಡೆಯದು ಎಂಬ ಸತ್ಯ
ತಿಳಿಯಬೇಕು. ಉತ್ಪಾದನೆಯಲ್ಲಿ ಇಂಥ ಸವ
ಗಳನ್ನು ಒಡ್ಡದೆ ದಲಿತರಿಗೆ ನ್ಯಾಯ ಸಿಕ್ಕುವ

—ಕೃಷ್ಣಪ್ಪ

**ಸಂಘಟನೆ - ಹೋರಾಟ**



# ಜಾತಿ: ಇಂಡಿಯಾದ ಕ್ಯಾನ್ಸರ್!

ಅಸ್ಪೃಶ್ಯತೆಯ ಎರಡು ಪ್ರಸಂಗಗಳು ನನ್ನ ಮನಸ್ಸನ್ನು ಹಿಂಡಿವೆ. ಮನುಷ್ಯತ್ವವೇ ಇಲ್ಲದ ಜನರ ನಡುವೆ ಅಸ್ಪೃಶ್ಯರ ಬಾಳು ಪ್ರಾಣಿಗಳಿಗಿಂತಲೂ ಕೀಳಾಗಿದೆ. ಇಂಡಿಯಾದೊಡಲ ತುಂಬ ಹಬ್ಬಿಕೊಂಡಿರುವ ಜಾತಿಯೆಂಬ ಕ್ಯಾನ್ಸರ್ ನಾಶಕ್ಕೆ ಮನುಷ್ಯತ್ವವುಳ್ಳ ಎಲ್ಲರೂ ಪ್ರಯತ್ನಿಸಬೇಕಾಗಿದೆ.

ಟಿ. ನರಸೀಪುರ ತಾಲ್ಲೂಕಿನ ಮಲೆಯೂರು ಗ್ರಾಮದಲ್ಲಿ ಮುನ್ನೂರು ಮಾದಿಗರ ಕುಳಗಳಿವೆ. ಇಲ್ಲಿನ ಲಿಂಗಾಯಿತ ಕುಳಗಳು ಸುಮಾರು ಎಪ್ಪತ್ತು. ಕಳೆದ ಎಂಟು ತಿಂಗಳ ಹಿಂದೆ ಮಹದೇವು ಮತ್ತು ಚಿಕ್ಕಂಡು ಎಂಬ ಇಬ್ಬರು ದಲಿತ ಯುವಕರನ್ನು ಲಿಂಗಾಯಿತ ಸಾಹುಕಾರ ಮಹದೇವಪ್ಪ ಮತ್ತು ಆತನ ಇತರ ಹತ್ತು ಮಂದಿ ಸ್ನೇಹಿತರು ಅಮಾನುಷವಾಗಿ ಚಚ್ಚಿದರು.

ಮೇಲ್ಜಾತಿಯವರಿಂದ ಪ್ರಾಣಾಂತಿಕ ಹೊಡೆತ ತಿಂದ ಮಹದೇವು ಮತ್ತು ಚಿಕ್ಕಂಡು ಬನ್ನೂರಿನ ಪೋಲೀಸರ ಪ್ರಕಾರ ಅಪರಾಧಿಗಳಾದರು. ಈ ಹಿನ್ನಲೆಯಲ್ಲಿ ದಲಿತ ಸಂಘರ್ಷ ಸಮಿತಿ ನೇರ ಪ್ರವೇಶಿಸಿ ಪೋಲಿಸರಿಗೆ ವಾಸ್ತವ ಸಂಗತಿ ತಿಳಿಸಿ ನಿಜವಾದ ಅಪರಾಧಿಯನ್ನು ಶಿಕ್ಷಿಸಿ ಎಂದು ಮೆರವಣಿಗೆ ನಡೆಸಿತು.

ಪರಿಣಾಮವಾಗಿ ಪೋಲಿಸರು ತಾತ್ಕಾಲಿಕ ಮೌನ ವಹಿಸಿದರು. ಆದರೆ ಈಗ ಮಹದೇವು ಚಿಕ್ಕಂಡು ಆದಿಯಾಗಿ ಹತ್ತು ಜನ ದಲಿತರು ಕೋರ್ಟಿಗೆ ತಿರುಗುತ್ತಿದ್ದಾರೆ. ಬಡವರಿಗೆ ದಕ್ಕದ ನ್ಯಾಯ ಅವರನ್ನ ಅಪರಾಧಿಗಳ ಸ್ಥಾನದಲ್ಲಿ ನಿಲ್ಲಿಸಿ ವ್ಯಂಗವಾಗಿ ನಗುತ್ತಿದೆ.

ನಂಜನಗೂಡು ತಾಲ್ಲೂಕು ತಗಡೂರಿನಲ್ಲಿ ಮತ್ತೊಂದು ವಿಚಿತ್ರ ದುಸ್ಥಿತಿ ಉಂಟಾಗಿದೆ. ಇಲ್ಲೊಂದು ಪ್ರಾಥಮಿಕ ಆರೋಗ್ಯ ಕೇಂದ್ರವುಂಟು. ಸದರಿ ಕೇಂದ್ರಕ್ಕೆ ಸುಮಾರು ಮೂರು ತಿಂಗಳ ಹಿಂದೆ ವಿಠಲ ರಾಮಮೂರ್ತಿಯೆಂಬ ಜಿಲ್ಲಾ ಆರೋಗ್ಯ ಶಿಕ್ಷಕ ಸಭೆಗೆ ಭೇಟಿ ನೀಡಿದ. ಅದು ಸದರಿ ಆರೋಗ್ಯ ಕೇಂದ್ರದ ನೌಕರರ ತಿಂಗಳ ಮೀಟಿಂಗು, ಸದರಿ ಶಿಕ್ಷಕ ನೌಕರರಿಗೆ ಹೆಚ್ಚಿನ ತಿಳುವಳಿಕೆ, ವೃತ್ತಿ ಸಂಬಂಧವಾದ ವಿಶೇಷ ಮಾಹಿತಿಗಳನ್ನ ನೀಡಲು ಬಂದಿದ್ದ.

ಶಿಸ್ತಿನ ಸಿಪಾಯಿ ಎಂದು ಹೆಸರಾಂತ ಜಿಲ್ಲಾ ಆರೋಗ್ಯಧಿಕಾರಿ ನಾರಾಯಣಶರ್ಮರ ಚೇಲಾ ಆಗಿರುವ ಸದರಿ ಶಿಕ್ಷಕನು ಮಹಾ ಜಾತಿವಾದಿ. ಅಂದಿನ ಅವನ ನಡವಳಿಕೆಗಳಲ್ಲಿ ಅದು ವ್ಯಕ್ತವಾಯಿತು.

ದಲಿತರನ್ನು ಕಂಡರೆ ಉರಿಕಾರುವ ಈ ಮೂರ್ಖನು ಚಿಕ್ಕಮಾದಮ್ಮ ಎಂಬ ಇದೇ ಆಸ್ಪತ್ರೆಯ ನೌಕರಳನ್ನು ಹೀನಾಮಾನವಾಗಿ ಬೈದು "ಕಂಪಲ್ಸರಿ ರಿಟೈರ್‌ಮೆಂಟ್ ತೆಗೆದುಕೋ" ಎಂದ. ಅದ ಕೇಳಿ ಗಾಬರಿಯಾದ ಆಕೆ ಮೂರ್ಛೆ ಹೋದಳು. ಪರಿಸ್ಥಿತಿ ಬಿಗಡಾಯಿಸಿದ್ದನ್ನ ನೋಡಿ, ಆರೋಗ್ಯ ಶಿಕ್ಷಕ ಜಾಗ ಖಾಲಿ ಮಾಡಿದ.

ಮೂರ್ಛಿತಳಾದ ಚಿಕ್ಕಮಾದಮ್ಮನಿಗೆ ಅದೇ ಆಸ್ಪತ್ರೆಯ ಡಾ॥ ತೇಜಪ್ರಭ ಸೂಕ್ತ ಚಿಕಿತ್ಸೆನೀಡಿ ಜ್ಞಾನ ಮರಳುವಂತೆ ಮಾಡಿದಳು. ಸ್ವಲ್ಪ ಹೊತ್ತಿನ ನಂತರ ಯಾರೋ ಒಬ್ಬರು ಹೋಗಿ Bus Stand ನಲ್ಲಿದ್ದ ವಿಠಲರಾಮಮೂರ್ತಿಯನ್ನು ವಾಪಸ್ ಕರೆತಂದರು. ತನ್ನ ತಪ್ಪನ್ನು ಮುಚ್ಚಿಡುವ ಪ್ರಯತ್ನದಲ್ಲಿ ಸದರಿ ಮೂರ್ಖ ಅಧಿಕಾರಿಯು " ಇಲ್ಲಿರೋ ಎಲ್ಲಾ ಹೊಲೆಯರನ್ನ ಸಸ್ಪೆಂಡ್ ಮಾಡ್ತೀನಿ ಕರೀರಿ " ಎಂದು ಅರ್ಭಟಿಸುತ್ತಾ ಆಸ್ಪತ್ರೆಗೆ ನುಗ್ಗಿದ.

ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು ನಿಜವಾಗಲೂ ಪ್ರಾಮಾಣಿಕರಾಗಿದ್ದಲ್ಲಿ ಚೂರು ಮನುಷ್ಯತ್ವ ಅವರಿಗಿದ್ದರೆ ಈ ಕೂಡಲೆ ವಿಠಲ ರಾಮಮೂರ್ತಿಯನ್ನು ಸಸ್ಪೆಂಡ್ ಮಾಡಲಿ.

ಮುಳ್ಳೂರು ನಾಗರಾಜ್

## ಮುಂಜಾವು

ಬಿ. ಟಿ. ಲಲಿತಾ ನಾಯಕ್

ಕಲ್ಲು ಮಣ್ಣು ಕಟ್ಟಿಗೆಗಳಿಗೆಲ್ಲ ಆಕಾರ ಕೊರೆದು
ಬಣ್ಣ ಬಣ್ಣದ ಚಿತ್ತಾರ ಬಿಡಿಸಿದಿರಿ
ರತ್ನ ವಜ್ರವ ತೊಡಿಸಿ ಪಟ್ಟೆಪೀತಾಂಬರ ಉಡಿಸಿ ಚೆಲುವ
ಚೆಲುವೆಯರ ಕೈಗೆ ಗದಾ–ಪದ್ಮಗಳ ಹಿಡಿಸಿದಿರಿ !
ಹತ್ತಾರು ಕೈಗಳನು ಹಲವಾರು ಮುಖಗಳನು
ಹಂದಿ ಆಮೆಗಳಂಥ ಅವತಾರ ಕಥೆಗಳನು
ಬೆಚ್ಚಿ ಬೀಳಿಸುವಂತೆ ಹೆಣೆದು ಹಾಡಿದಿರಿ
ಗಂಧ ಕರ್ಪೂರ ಬತ್ತಿ ಹೊಗೆಯಿಂದ ನಮಗೆ ಮತ್ತು ಬರಿಸಿ
ಮೋಕ್ಷ ಮುಕ್ತಿಗಳಂಥ ಉಕ್ತಿ ಹೇಳಿದಿರಿ
ಜನ್ಮಾಂತರ ಕರ್ಮ ಹಣೆಬರಹಗಳ ಬೊಗಳೆ ಸಾರುತ್ತ
ಹಸಿಯ ಮನದಲಿ ಭಯದ ಬೀಜವ ಬಿತ್ತಿದಿರಿ
ಚಾಣಾಕ್ಷತನದಿಂದ ಮಣಿಸಿ ಕೈ ಮುಗಿಸಿದಿರಿ
ನರನರಗಳಲಿ ಸ್ವರ್ಗಸುಖವೆಂಬ ಕನಸ ಹರಿಸಿದಿರಿ
ಎಳೆ ಹರೆಯ ಬಾಲೆಯರು ಬಸಿರ್ಹೊತ್ತು ನಿಂತಾಗ
'ಗಾಳಿ–ಬೆಳಕಿನ ಕೂಟ' ವಿದೆಂದು ಅಪ್ಪಣೆಯ ಕೊಡಿಸಿದಿರಿ !
ಸಂದೇಹವಿಲ್ಲದೆಯೆ ನಾವಿದೆಲ್ಲವ ನಂಬಿದೆವು
ಬಂಡವಾಳದ ಮೊತ್ತ ಬಡಾಯಿಸಿಕೊಂಡಿರಿ ನೀವು
ಆಗ ನಿದ್ದೆ ಮಂಪರು ನಮಗೆ ಜೋರಾಗಿ ಕವಿದಿತ್ತು
ನಿಮ್ಮ ಕಣ್ಣುಮುಚ್ಚಾಲೆಯಾಟ ಭರದಿ ನಡೆದಿತ್ತು
ಈಗ ಹಕ್ಕಿ ಪಕ್ಷಿಗಳೆಲ್ಲ ಕೂಗಿ ಎಚ್ಚರಿಸುತಿವೆ ನಮ್ಮನ್ನು
ಮುಂಜಾವಿನ ಬೆಳಕು ಕಣ್ಣ ತೆರೆಸುತಿದೆ
ದೀರ್ಘ ರಾತ್ರಿಯ ಮೌನ ದೂರವಾಗಿದೆ ಇನ್ನು
ಬಾಯಿ ಬಂದಿದೆ ನಮಗೆ ಹೊಸ ದೃಷ್ಟಿಕೂಡ
ನಮ್ಮೆದೆಯ ಮೇಲಿಡುವ ನಿಮ್ಮ ಕಾಲಿಗೆ ಪೂಜೆ
ಸಲ್ಲಬಹುದೆಂಬ ಕನಸ ಕಾಣದಿರಿ ನೀವು
ಬರುತ್ತಿದ್ದೇವೆ ಬಿರುಗಾಳಿಯಾಗಿ
ಗುಡುಗಾಗಿ ಸಿಡಿಲಾಗಿ
ಇನ್ನು ತಡೆಯಲಾರಿರಿ ನಮ್ಮ
ಸರಿದು ನಿಲ್ಲಿ !

# ಗಣಿಗಳಿಂದ ಸಿಡಿದ ಐತಿಹಾಸಿಕ ಕಾರ್ಮಿಕ ಮೆರವಣಿಗೆ

ನಗರದ ಫ್ಯಾಕ್ಟರಿ ಕಾರ್ಮಿಕರ ಮೆರವಣಿಗೆಯನ್ನೇ ಕಂಡಿರುವ ದೆಹಲಿ ಏಪ್ರಿಲ್ 20, 1982 ರಂದು ಹತ್ತು ಸಾವಿರಕ್ಕೂ ಮಿಕ್ಕಿದ ನಾನಾ ಭಾಗಗಳ ಗಣಿಗಳಿಂದ ಬಂದಿದ್ದ ಗಣಿ ಕಾರ್ಮಿಕರ ಮೆರವಣಿಗೆಯನ್ನು ಕಂಡು ಪುಲಕಗೊಂಡಿರಲು ಸಾಕು.

ಹರಿಯಾಣ, ಪಂಜಾಬ, ಬಿಹಾರ,ಮಧ್ಯಪ್ರದೇಶ, ಆಂಧ್ರಪ್ರದೇಶ, ಉತ್ತರಪ್ರದೇಶ, ಮಹಾರಾಷ್ಟ್ರ, ತಮಿಳ್ನಾಡು, ಬಂಗಾಲ ಮುಂತಾದ ಹಲವು ಹತ್ತು ರಾಜ್ಯಗಳ ಸಾವಿರಾರು ಕಾರ್ಮಿಕರು ದೆಹಲಿಯಿಂದ ಕೇವಲ 15 ಕಿ.ಮೀ. ದೂರದಲ್ಲಿ ತಮ್ಮ ಮೆರವಣಿಗೆಯನ್ನು ಪ್ರಾರಂಭಿಸಿದ್ದರು. ಗಂಡಸ್ಸರು–ಹೆಂಗಸರು–ಮಕ್ಕಳು–ವೃದ್ಧರು ಎಲ್ಲರಿಂದ ಕೂಡಿದ್ದ ಈ ಮೆರವಣಿಗೆಯು ಕ್ರಾಂತಿಕಾರಿ ಘೋಷಣೆಗಳಿಂದ ಆರಂಭಗೊಂಡು ದೆಹಲಿಯ ಪಾಷ್ ಕಾಲೋನಿಗಳಲ್ಲಿ ಕಿವಿಗಡಚಿಕ್ಕುವ ಹಾಗೆ ಕೂಗುತ್ತಾ ಸಂಸತ್ ಭವನದೆಡೆಗೆ ಸಾಗಿದ್ದರು. ಅಂತರ್ ರಾಜ್ಯ ಕಾರ್ಮಿಕ ಕಾನೂನು, ಜೀತ ನಿರ್ಮೂಲನಾ ಕಾನೂನು, ಬಾಲ ಕಾರ್ಮಿಕರ ವಿರೋಧಿ ಕಾನೂನು ಮೊದಲಾದವುಗಳಾವುವನ್ನೂ ಪಾಲಿಸದ ಗು ರು ಕು ಲ–ಸರಾಯ್–ಕಟನ್–ಅನಖೀರ್–ಅನಂಗಪುರ– ಲ ಕ ಡ ಪು ರ –ಬದರ್‌ಪುರ–ಲಾಲ್‌ಕುಂವಾ–ಗದಾಖೋರ್ ಇತ್ಯಾದಿ ಗಣಿಗಳಿಂದ ಬಂದ ಈ ಜನರು ಅಂದು ಮಧ್ಯಾಹ್ನ 12–30ರ ಹೊತ್ತಿಗೆ ಬೋಟ್‌ಕ್ಲಬ್ ಮುಂದೆ ನೆರೆದರು. ಮೆರವಣಿಗೆಯಲ್ಲಿ ಸ್ವಾಮಿ ಅಗ್ನಿವೇಶ್, ದಲಿತ ನಾಯಕ ಜಯಸಿಂಹ, ಜನತಾಪಕ್ಷದ ಅಧ್ಯಕ್ಷ ಚಂದ್ರಶೇಖರ್, ಸಮಾಜವಾದಿ ಧುರೀಣ ವೇದಪ್ರಕಾಶ್ ವಿದ್ರೋಹಿ ಸಂತರಾವ್ ಬಾಬು ಮುಂತಾದವರೂ ನಡೆದಿದ್ದರು. ಬೋಟ್‌ಕ್ಲಬ್‌ಗೆ ಮೆರವಣಿಗೆಯು ಸಾಗುತ್ತಲೇ ಭಾರೀ ಬಹಿರಂಗ ಸಭೆ ಉದ್ದೇಶಿಸಿ ಅಖಿಲ ಭಾರತ ಜೀತ ವಿಮೋಚನಾ ಸಂಘದ ಅಧ್ಯಕ್ಷ ಸ್ವಾಮಿ ಅಗ್ನಿವೇಶ್ ಮಾತನಾಡಿ ಗಣಿಕಾರ್ಮಿಕರ, ಕಲ್ಲು ಒಡೆಯುವವರ ದುಃಖ ದುಮ್ಮಾನಗಳ ಬಗ್ಗೆ ಸರ್ಕಾರ ತಾಳಿರುವ ಕಿವುಡು ಧೋರಣೆಯನ್ನು ಟೀಕಿಸಿದರು. ಸಂಘರ್ಷದ ದಾರಿ ಹಿಡಿದಿರುವ ಕಾರ್ಮಿಕರನ್ನು ಅಭಿನಂದಿಸಿದರು. ಕಾರ್ಮಿಕರಿಗೆ ಸಿಗಬೇಕಾದ ನಾನಾ ಸೌಲಭ್ಯಗಳನ್ನು ಒದಗಿಸದ ಗಣಿಗಳ ಮಾಲಿಕರನ್ನು ಉಗ್ರವಾಗಿ ಟೀಕಿಸಿ ವೇದಪ್ರಕಾಶ್ ವಿದ್ರೋಹಿ, ಫರೀದಾಬಾದ್‌ನ ಗಣಿ ಕಾರ್ಮಿಕರ ಸಂಘದ ಅಧ್ಯಕ್ಷ ಜಯಸಿಂಹ ಮಾತಾಡಿದರು. ನಂತರ ಸಂಸತ್ ಸದಸ್ಯರೂ ಖ್ಯಾತ ಸಮಾಜವಾದಿಗಳೂ ಆದ ಸುರೇಂದ್ರ ಮೋಹನ್, ಬಿಹಾರದ ಧನಬಾದ್ ಕಲ್ಲಿದ್ದಲು ಕ್ಷೇತ್ರದ ಗಣಿಕಾರ್ಮಿಕರ ಪ್ರಮುಖ ನಾಯಕರೂ ಸಂಸತ್ ಸದಸ್ಯರೂ ಆದ ಎ.ಕೆ. ರಾಯ್, ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ಸಂಸತ್ ಸದಸ್ಯ ಬ್ಯಾನರ್ಜಿ ಮತ್ತು ಸಂಸತ್ತಿನಲ್ಲಿ ಗಣಿ ಕಾರ್ಮಿಕರ ತೊಂದರೆಗಳ ಬಗ್ಗೆ ಸದಾ ಪ್ರಶ್ನೆ ಎತ್ತುವ ಸಂಸತ್ ಸದಸ್ಯ ಮಧುದಂಡವತೆ ಯವರು ಮಾತಾಡುತ್ತಾ 'ಗಣಿ ಕಾರ್ಮಿಕರು ಜಾಗೃತಗೊಂಡು ತಮ್ಮ ಹಕ್ಕುಗಳಿಗಾಗಿ ಹೋರಾಡಲು ತೊಡಗಿರುವುದರಿಂದ ಅವರ ಕಷ್ಟಗಳು ದೂರಾಗುವ ಸಮಯ ದೂರವಿಲ್ಲ' ಎಂದು ನುಡಿದರು. ದೆಹಲಿಯ ಪ್ರಖ್ಯಾತ ಜನಪರ ನಾಟಕ ಸಂಸ್ಥೆ 'ನಿಶಾಂತ'ದವರು ಕಾರ್ಮಿಕರಿಗೆ ನಾಟಕ ಆಡಿ ತೋರಿಸಿ ಹೊಸ ಸಮಾಜ ರಚನೆಗಾಗಿ ಶ್ರಮಿಸುವ ಸಂದೇಶ ನೀಡಿದರು. ಈ ನಡುವೆ ಗಣಿ ಕಾರ್ಮಿಕ ಸಂಘದ ಪ್ರತಿನಿಧಿಗಳು ರಾಷ್ಟ್ರಪತಿ ಸಂಜೀವರೆಡ್ಡಿಯವರನ್ನು ಕಂಡು ತಮ್ಮ ಸಮಸ್ಯೆಗಳ ಬಗ್ಗೆ ಮನವಿ ಪತ್ರ ಸಲ್ಲಿಸಿದರು.

**ಕಲ್ಲು ಹಿಟ್ಟು ಮಾಡುವ ಕ್ರೇಷರ್ ನಿಂದಾಗಿ ಹವೆಯು ಕಲುಷಿತವಾಗುತ್ತಿದೆ. ಹಾಗಾಗಿ ಸಾವಿರಾರು ಜನರು ರಕ್ತವನ್ನೇ ವಾಂತಿ ಮಾಡಿಕೊಳ್ಳುತ್ತಾರೆ....ದೊಡ್ಡ ದೊಡ್ಡ ಕಲ್ಲುಬಂಡೆಗಳನ್ನು ಒಡೆಯಲು ನಾವು ಇಡಬೇಕಾದ ಬಾಂಬುಗಳಿಂದ ಸಿಡಿದ ಕಲ್ಲು ಚೂರುಗಳಿಗೆ ನಮ್ಮಲ್ಲಿ ಹಲವಾರು ಜನರ ಕಣ್ಣು-ಕೈಕಾಲುಗಳು ಬಲಿಯಾಗಿ ಹೋಗಿವೆ. ಇಷ್ಟು ಸಾಲದೆಂಬಂತೆ..............''**

**ರಾಷ್ಟ್ರಪತಿಗಳಿಗೆ ಸಲ್ಲಿಸಿದ ಮನವಿ ಪತ್ರ :**

ಮಾನ್ಯರೇ,

ದೇ ಶ ದ ರಾಜಧಾನಿಯಲ್ಲಿ ಪಾರ್ಲಿಮೆಂಟಿಗೆ ಕೇವಲ 20 ಕಿ.ಮೀ. ದೂರದಲ್ಲಿಯೇ 50 ಸಾವಿರಕ್ಕೂ ಹೆಚ್ಚಿನ ಗಣಿ ಕಾರ್ಮಿಕರು ಪಶುಗಳಿಗಿಂತಲೂ ಕೀಳಾದ ಜೀವನ ನಡೆಸುತ್ತಿದ್ದಾರೆ. ಇನ್ನೂವರೆಗೆ ಜೀತಪದ್ಧತಿಯು ರಾಜಾರೋಷವಾಗಿ ಜಾರಿಯಲ್ಲಿರುವ ಈ ಭಾಗದಲ್ಲಿ ಕಳೆದ ವರ್ಷ 150 ಜನರನ್ನು ಮಾತ್ರ ಬಿಡುಗಡೆಗೊಳಿಸಲಾಗಿದ್ದರೆ 5 ಮಾರ್ಚ್ 1982 ರಂದು ತಾನೇ ಸರ್ವೋಚ್ಚ ನ್ಯಾಯಾಲಯ ಇದೇ ಭಾಗದಲ್ಲಿರುವ ಸುಮಾರು 200 ಜನರನ್ನು ಬಿಡುಗಡೆಗೊಳಿಸಲು ಆದೇಶ ನೀಡಿರುವುದನ್ನು ಇ... ಗಮನಿಸಬಹುದಾಗಿದೆ. ಹೀಗೆ ಈ ಭಾಗದಲ್ಲಿಯ ಗಣಿ ಕಾರ್ಮಿಕರು ಜೀತದಾಳಿನಂತೆ ದುಡಿಯುತಿದ್ದು ಇವರಿಗೆ ಯಾವ ರೀತಿಯ ಸೌಲಭ್ಯಗಳೂ ಇಲ್ಲದಂತಾಗಿವೆ.

ಬೆಳಗ್ಗೆಯಿಂದ ರಾತ್ರಿಯವರೆಗೂ ಕಲ್ಲು ಒಡೆದರೂ ಹೊಟ್ಟೆ ತುಂಬಊಟ ಸಿಗುತ್ತಿಲ್ಲ; ಇಷ್ಟೇ ಅಲ್ಲ ನಮಗೆ ಸರಿಯಾಗಿ ಕುಡಿಯುವ ನೀರೂ ಸಹ ದೊರೆಯುತ್ತಿಲ್ಲ. ದೊರಕಿದಂಥ ನೀರು ಕುಡಿಯುವುದರಿಂದ ಬಹು ಸಂಖ್ಯೆಯ ಕಾರ್ಮಿಕರು ತೀವ್ರತರವಾದ ರೋಗಗಳಿಗೆ ಬಲಿಯಾಗುತ್ತಿದ್ದಾರೆ.

ಇಡೀ ಈ ಭಾಗದಲ್ಲಿ ಕಲ್ಲು ಹಿಟ್ಟು ಮಾಡುವ ಕ್ರಷರ್ ಬಳಸಲಾಗುತ್ತಿದ್ದು ಇದರಿಂದ ಹವೆಯು ಕಲುಷಿತವಾಗುತ್ತಿದೆ. ಹಾಗಾಗಿ ಸಾವಿರಾರು ಜನರು ರಕ್ತವನ್ನೇ ವಾಂತಿ ಮಾಡಿಕೊಳ್ಳುತ್ತಾರೆ; ಟಿ.ಬಿ. ರೋಗಕ್ಕೆ ಬಲಿಯಾಗಿದ್ದಾರೆ. ಆ ದ ರೆ ನಮಗೆ ಯಾವುದೇ ವಿಧದ ವೈದ್ಯಕೀಯ ಸೌಲಭ್ಯಗಳೇ ಈ ಗುಡ್ಡಗಾಡು ಪ್ರದೇಶದಲ್ಲಿಲ್ಲ. ದೊಡ್ಡ ದೊಡ್ಡ ಕಲ್ಲು ಬಂಡೆಗಳನ್ನು ಒಡೆಯಲು ನಾವು ಇಡಬೇಕಾದ ಬಾಂಬುಗಳಿಂದ ಸಿಡಿದ ಕಲ್ಲು ಚೂರುಗಳಿಗೆ ನಮ್ಮಲ್ಲಿ ಹಲವಾರು ಜ ನ ರ ಕಣ್ಣು–ಕೈ–ಕಾಲುಗಳು ಬಲಿಯಾಗಿ ಹೋಗಿವೆ. ಇಷ್ಟು ಸಾಲದೆಂಬಂತೆ ನಮ್ಮ ಮೇಲೆ ಕಂಟ್ರಾಕ್ಟರ್‌ಗಳು ಹಾಗೂ ಗಣಿಯ ಮಾಲೀಕರು ತಾವು ಸಾಕಿದ ಗೂಂಡಾಗಳನ್ನು ಛೂ ಬಿಡುತ್ತಾರೆ; ನಮ್ಮ ಹೆಂಡತಿ–ಮಕ್ಕಳ ಶೀಲಭಂಗ ಮಾಡಲಾಗುತ್ತದೆ; ನಾವು ಸ್ವಲ್ಪ ಪ್ರತಿಭಟಿಸಿದರೂ ನಮ್ಮ ಕೊಲೆಯನ್ನೂ ಸಹ ಮಾಡಲಾಗುತ್ತದೆ.

ನಾವು ಹು ಲ್ಲಿ ನ ಗುಡಿಸಲುಗಳಲ್ಲಿರುವುದರಿಂದ ಯಾವ ಹೊತ್ತಿನಲ್ಲೂ ಬೆಂಕಿ ಹಚ್ಚಬಹುದಾಗಿದೆ. ನಮ್ಮ ಮಕ್ಕಳಿಗೆ ಶಾಲೆಗೆ ಹೋಗುವ ಏರ್ಪಾಟು ಮಾಡಲಾಗಿಲ್ಲ. ಶೇಕಡಾ 99 ರಷ್ಟು ಜನ ನಾವು ದೇಶದ ಬೇರೆ ಬೇರೆ ರಾಜ್ಯಗಳವರಾಗಿದ್ದು ಹರಿಜನ-ಗಿರಿಜನ ಅಥವಾ ಹಿಂದುಳಿದ ಜಾತಿಗಳವರು ನಾವಾಗಿದ್ದೇವೆ. ಖಾಸಗಿ ಜನರ ಆಸ್ತಿಯಾಗಿರುವ ಗಣಿಗಳನ್ನು ಸರ್ಕಾರವೇ ವ ಹಿ ಸಿ ಕೊಂ ಡು ನಮ್ಮ ಶೋಷಣೆ ನಿಲ್ಲುವಂತಾಗಬೇಕು.—ಹೀಗೆ ಸರ್ಕಾರವನ್ನು ಒತ್ತಾಯಿಸಿರುವ ಗಣಿ ಕಾರ್ಮಿಕರ ಸಂಘವು ತಮ್ಮ ಮೇಲಿನ ಶೋಷಣೆ ನಿಲ್ಲಿಸಲು ಮತ್ತು ತಮ್ಮ ಮೂಲ ಆವಶ್ಯಕತೆಗಳನ್ನು ಪೂರೈಸಲು 8 ಬೇಡಿಕೆಗಳನ್ನು ಸರ್ಕಾರದ ಮುಂದಿಟ್ಟಿದೆ.

**ಹೊರ ರಾಜ್ಯಗಳಲ್ಲಿ**

**ಏಕಲವ್ಯ**

ಕಂಗಾಲ ಚಿತ್ರ

# ಸಮಾಜ ಕಲ್ಯಾಣ ವಿದ್ಯಾರ್ಥಿನಿಲಯ

## ಅಥವಾ

# "ಕೊಳಚೆಗೇರಿ"

**ಕೋಲಾರ ಪ್ರತಿನಿಧಿಯಿಂದ**

ಸಮಾಜಕಲ್ಯಾಣ ಇಲಾಖೆ ನಡೆಸುತ್ತಿರುವ ದಲಿತ ವಿದ್ಯಾರ್ಥಿ ನಿಲಯ ಎಂಬ 'ಕೊಳಚೆಗೇರಿ'ಗಳಲ್ಲಿ ಕೋಲಾರದ ದಲಿತ–ವಿದ್ಯಾರ್ಥಿ ನಿಲಯವೂ ಒಂದು. ಪ್ರೌಢಶಾಲೆಯ ಮಟ್ಟದವರೆಗಿನ ವಿದ್ಯಾರ್ಥಿಗಳು ಈ ಸಾರ್ವಜನಿಕ ವಿದ್ಯಾರ್ಥಿನಿಲಯದಲ್ಲಿ ದೈಹಿಕವಾಗಿ ಹಾಗೂ ಮಾನಸಿಕವಾಗಿ ರೋಗಗ್ರಸ್ಥರಾಗಿ ಬೆಳೆಯುತ್ತಿದ್ದಾರೆ. ಹಾಸ್ಟೆಲ್ಲಿಗೆ ಅರ್ಜಿ ಹಾಕುವುದರಿಂದ ಹಿಡಿದು ಹಾಸ್ಟೆಲ್ಲನ್ನು ಬಿಡುವವರೆಗೂ ಇಲ್ಲಿ ದಲಿತ ವಿದ್ಯಾರ್ಥಿಗಳು ನಾನಾ ರೀತಿಯ ಸುಲಿಗೆಗೆ ಒಳಗಾಗುತ್ತಾರಲ್ಲದೆ, ಈ ವಿದ್ಯಾರ್ಥಿನಿಲಯಕ್ಕೆ ಸೇರಿ ಸ್ಕೂಲಿಗೆ ಹೋಗುವ ಹುಡುಗರು ಸ್ಕೂಲಿನಲ್ಲೂ ನಾನಾ ರೀತಿಯ ಹಿಂಸೆಯ ಬಲಿಪಶುಗಳಾಗುತ್ತಿದ್ದಾರೆ.

ಹಾಸ್ಟೆಲಿಗೆ ಸೇರಬೇಕಾದರೆ ಅರ್ಜಿಯನ್ನು ಉಚಿತವಾಗಿ ಹಂಚಬೇಕಾದ ಕಡೆ, ಪ್ರತಿಯೊಬ್ಬ ಅಭ್ಯರ್ಥಿಯಿಂದ ಅರ್ಜಿಯೊಂದಕ್ಕೆ 25 ಪೈಸೆಗಳಿಂದ 1 ರೂಪಾಯಿನ ತನಕ ಇಲಾಖೆಯ ನೌಕರರು ವಸೂಲಿ ಮಾಡಿಕೊಂಡು ತಮ್ಮ ಸುಲಿಗೆಯ ಅಧ್ಯಾಯಕ್ಕೆ ತಳಪಾಯ ಹಾಕಿಕೊಂಡು ಬಿಡುತ್ತಾರೆ. 10 ವರ್ಷಗಳ ಹಿಂದೆ ಯಾವ ಸಂಖ್ಯೆಯಲ್ಲಿ ವಿದ್ಯಾರ್ಥಿಗಳಿದ್ದರೋ, ಅಷ್ಟೇ ಸಂಖ್ಯೆಯ ವಿದ್ಯಾರ್ಥಿಗಳನ್ನು ಮಾತ್ರ ಇಲ್ಲಿ ಸೇರಿಸಿಕೊಳ್ಳಲಾಗುತ್ತದೆ. ಒಂದೊಂದು ಚಿಕ್ಕ ಕೊಠಡಿಗೂ ಆರೇಳು ವಿದ್ಯಾರ್ಥಿಗಳನ್ನು ಕುರಿಗಳಂತೆ ತುಂಬಲಾಗುತ್ತದೆ.

ಈ ಹಾಸ್ಟೆಲಿಗೆ ಸೇರಿದ ವಿದ್ಯಾರ್ಥಿಗಳು ಓದುವುದಕ್ಕೆ ಬಂದವರೆಂಬುದನ್ನು ಹಾಸ್ಟೆಲ್ಲಿನ ನೌಕರರು ಮರೆಯುತ್ತಾರೆ. ನೀರು ಇಲ್ಲದಾಗ ನೀರು ಹೊರುವುದು, ತರಕಾರಿ ಕತ್ತರಿಸುವುದು, ಅಕ್ಕಿ ಆಯುವುದು ಇತ್ಯಾದಿ ಕೆಲಸಗಳನ್ನು ವಿದ್ಯಾರ್ಥಿಗಳು ಸರದಿಯಂತೆ ಮಾಡಬೇಕಾಗುತ್ತದೆ. ನಿಲಯಕ್ಕೆ ಸೇರಿದ ವಿದ್ಯಾರ್ಥಿಗೆ ಸರ್ಕಾರ ನೀಡುವ ಮಾಸಿಕ ವೇತನ 75 ರೂಪಾಯಿಗಳು; ಎರಡು ಹೊತ್ತಿನ ಊಟಕ್ಕೆ ಕಳೆದರೆ ಯಾವುದಕ್ಕೂ ಸಾಲದು. ಹೀಗಾಗಿ ಸೋಪು, ಸೀಗೇಕಾಯಿ, ಎಣ್ಣೆ ಇತ್ಯಾದಿಗಳನ್ನು ವಿದ್ಯಾರ್ಥಿಗಳು ವಾರ್ಡನ್ ರೂಂನಲ್ಲಿ ಮಾತ್ರ ನೋಡುತ್ತಿರಬೇಕಾಗುತ್ತದೆ.

ಸೊಸೈಟಿಗಳಲ್ಲಿ ಮುಗ್ಗಿದ, ಹುಳು ಹಿಡಿದ ಅಕ್ಕಿ ಕಾಗಿಯೆಲ್ಲವೂ ನೇರವಾಗಿ ಈ ವಿದ್ಯಾರ್ಥಿನಿಲಯಕ್ಕೇ ಬರುತ್ತದೆ. ಪ್ರಾಣಿಗಳು ಕೂಡಾ ತಿನ್ನಲು ಹೇಸುವ ಆಹಾರವನ್ನು ಇಲ್ಲಿ ಬೇಯಿಸಿಕೊಟ್ಟರೂ ಅದರಲ್ಲಿ ಕಲ್ಲು ಮಣ್ಣನ್ನು ವಿದ್ಯಾರ್ಥಿಗಳು ಆರಿಸುವುದು ಮಾತ್ರ ತಪ್ಪುವುದಿಲ್ಲ. ಅಕ್ಕಿ ಇದ್ದರೆ ನೀರಿರುವುದಿಲ್ಲ, ನೀರಿದ್ದರೆ ಸೌದೆ ಇರುವುದಿಲ್ಲ, ಎಲ್ಲಾ ಇದ್ದರೆ ಕಲಾಯಿ ಇಲ್ಲದ ಪಾತ್ರೆಗಳೇ ತೂತಾಗಿರುತ್ತವೆ.

ಹಾಸ್ಟೆಲ್ಲಿನಲ್ಲಿ ಕೆಲಸದ ನಂತರ ಮುಗ್ಗಿದ, ಕಲಬೆರಕೆಯಾದ ಬಿಸಿ ಬಿಸಿ ಅನ್ನ ತಿಂದು ಶಾಲೆಗೆ ಹೋದರೆ ಅಲ್ಲಿ ಒಂದು ನಿಮಿಷ ತಡವಾದರೂ ಮೇಷ್ಟರುಗಳ ಕ್ರೂರ ಬೈಗಳುಗಳು—"ಈ ದರಿದ್ರ ಮುಂಡೇ ಮಕ್ಕಿಗೆ ಬಿಸಿ ಊಟ ಬಿತ್ತು. ಇನ್ನು ಚಿಂತೆ ಏನು.". ಜತೆಗೆ ಹೊಡೆತ. ಹೀಗೆ ನೂರೆಂಟು ನೋವು, ಅವಮಾನ, ಸಂಕಟಗಳು ವಿದ್ಯಾರ್ಥಿಗಳ ದಿನಚರಿಯಾಗುತ್ತಿರುತ್ತದೆ. ರಾತ್ರಿ ಮಲಗಿದಾಗ, ತಿಗಣೆಯ ರಕ್ತದ ಕಲೆಗಳ ಗೋಡೆಗಳ ನಡುವೆ ದಣಿದು ಮಲಗಿದ ವಿದ್ಯಾರ್ಥಿಗಳ ಅಳಿದುಳಿದ ರಕ್ತವನ್ನು ತಿಗಣೆ, ಸೊಳ್ಳೆ, ಕೂರೆಗಳು ಹಂಚಿಕೊಳ್ಳುತ್ತವೆ. ಕೆಲವೊಮ್ಮೆ ವಿದ್ಯಾರ್ಥಿಗಳಿಗೆ ಕಜ್ಜಿ, ರಕ್ತ ಕುರುಬು, ವಾಂತಿ, ಭೇದಿ ಆದಾಗ ಈ ಕೊಠಡಿಗಳೆಲ್ಲಾ ಔಷಧಿ ಮಾತ್ರೆ ಇಲ್ಲದ ಆಸ್ಪತ್ರೆಯ ವಾರ್ಡುಗಳಾಗುತ್ತವೆ.

ಈ ರೀತಿ ತೊಂದರೆಗೆ ಆಗಾಗ್ಗೆ ಸಿಕ್ಕಿಕೊಳ್ಳುವ ವಿದ್ಯಾರ್ಥಿಗಳನ್ನು ಶಾಲೆಯ ಮೇಷ್ಟರುಗಳು ಬಯ್ಯುವುದೂ, ವಾರ್ಡನ್‌ಗೆ ದೂರು ಹೇಳುವುದೂ, ಟಿ. ಸಿ. ಕೊಡುತ್ತೇವೆಂದು. ಬೆದರಿಕೆ ಹಾಕುವುದೂ ನಡೆಯುತ್ತಲೇ ಇರುತ್ತದೆ. ಬಟ್ಟೆ ಇಲ್ಲದೆ, ಪುಸ್ತಕಗಳಿಲ್ಲದೆ, ಸ್ನಾನವಿಲ್ಲದೆ, ರೋಗ ಹತ್ತಿದ ಮೈಯ್ಯಲ್ಲಿ ತಮ್ಮ ಮೈ–ಮನಸ್ಸುಗಳನ್ನು ಹಿಡಿಯಷ್ಟು ಮಾಡಿಕೊಂಡು ಮುದುಡಿ ಕೂರುವ ಎಷ್ಟು ಮಂದಿ ವಿದ್ಯಾರ್ಥಿಗಳು ನಗುನಗುತ್ತಾ ಪಾಠ ಕಲಿಯಲು ಸಾಧ್ಯ ಎಂಬುದು ಈ "ದಲಿತೋದ್ಧಾರ"ದ ಬಂಬಡಾ ಬಜಾಯಿಸುವ ಸರ್ಕಾರಕ್ಕೆ ಹೇಗೆ ಗೊತ್ತಾಗಬೇಕು. ? ಕೊಳಕು ಬಟ್ಟೆ ಹಾಕಿಕೊಂಡ ಕಪ್ಪು ಮುಖಗಳನ್ನು, ವಿದ್ಯಾರ್ಥಿನಿಲಯದಿಂದ ಸ್ಕೂಲಿಗೆ ಬರುವವರನ್ನು ಅವಮಾನವೀಯವಾಗಿ ನೋಡುವ ಅಧ್ಯಾಪಕರ ಬಗ್ಗೆ ಬರೆಯುವುದೂ ಅಸಹ್ಯವಾಗುತ್ತದೆ.

ವಿದ್ಯಾರ್ಥಿನಿಲಯದ ವಾರ್ಡನ್ ಒಬ್ಬ ಜಾತೀವಾದಿಯಾಗಿದ್ದು ಸವರ್ಣೀಯ ವಿದ್ಯಾರ್ಥಿಗಳಿಗೆ ಬೇರೆ ಕೊಠಡಿಗಳನ್ನು ಕೊಟ್ಟು ಮೇಲಧಿಕಾರಿಗಳಿಂದ "ಭೇಷ್" ಅನ್ನಿಸಿಕೊಂಡಿದ್ದಾನೆ. ವರುಷಕ್ಕೆ ಎರಡು ಬಾರಿ ಭೇಟಿ ಕೊಡುವ ಬಿ. ಡಿ. ಓ. ಸಮಾಜ ಕಲ್ಯಾಣಾಧಿಕಾರಿ ಮೊದಲಾದವುಗಳು ಧರ್ಪದಿಂದ, ಬೂಟುಗಳ ತುದಿಯಿಂದ ವಿದ್ಯಾರ್ಥಿಗಳನ್ನು ಮಾತಾಡಿಸುತ್ತಾರೆ.

### ಸಂಜೆ ಪಾಠ

ವಿದ್ಯಾರ್ಥಿಗಳ ತೊಂದರೆಗಳಿಗೆ ಕಿವಿಕೊಡದೆ ಸರಕಾರ ಕೆಲವು ಮೇಷ್ಟರುಗಳನ್ನು ಸಂಜೆ ಪಾಠಕ್ಕಾಗಿ ನೇಮಕ ಮಾಡಿದೆ. ಈ ಮೇಷ್ಟರುಗಳು ಅಧಿಕಾರಿಗಳ ಜತೆ ಸೇರಿ ತಿಂಗಳಿಗೆ ಎರಡು ಬಾರಿ ಬಂದು ಸಂಬಳ ನುಂಗುತ್ತಾರೆ.

ಈ ಉಚಿತ ವಿದ್ಯಾರ್ಥಿನಿಲಯ ಎಲ್ಲಾ ರೀತಿಯಿಂದಲೂ "ಭಯಂಕರ ಉಚಿತ" ವಿದ್ಯಾರ್ಥಿನಿಲಯವೇ ಆಗಿದೆ. ಯಾವಾಗಲೋ ಬರುವ ಉಚಿತ ಪುಸ್ತಕಗಳು ಹೇಗೋ ಮಾರಾಟದಂಗಡಿಗೆ ಅಧಿಕಾರಿಗಳ ಮನೆಗಳಿಗೆ ಸೇರುತ್ತವೆ. ಕೆಲವು ಬಾರಿ ದಬಾಯಿಸಿ ಕೇಳಿದಾಗ ಪಡೆದಿರುವ ಪುಸ್ತಕಗಳಿಗಿಂತ ಹೆಚ್ಚು ಪುಸ್ತಕಗಳ ಸಂಖ್ಯೆಯ ಎದುರು ಸಹಿ ಹಾಕಿದ್ದೂ ಉಂಟು. ಈ ರೀತಿ ಬರೆಯುತ್ತಾ ಹೋದರೆ ಇಲ್ಲಿನ ಅವ್ಯವಹಾರಗಳ ಪಟ್ಟಿಗೆ ಲೆಕ್ಕವಿಲ್ಲ.

ಹಾಸ್ಟೆಲಿಗೆ ನೀರು ಹೊತ್ತು, ಅಡಿಗೆ ಮಾಡಿಕೊಂಡು, ರೋಗ ಹತ್ತಿಸಿಕೊಂಡು, ಅವಮಾನಗಳಿಗೆ ಬಲಿಯಾದ ಎಷ್ಟು ಮಂದಿ ದಲಿತ ವಿದ್ಯಾರ್ಥಿಗಳು ಪರೀಕ್ಷೆಗಳಲ್ಲಿ ಪಾಸಾಗಲು ಸಾಧ್ಯ ? ಸ್ಕೂಲಿಗೆ ಕಳಿಸುವಾಗ ತಂದೆ ತಾಯಂದಿರು ಕಾಣುವ ಕನಸುಗಳಿಗೆ ಸರ್ಕಾರವೇ ಬೆಂಕಿ ಹಚ್ಚಿರುತ್ತದೆ.

---

ಚಂದಾ ಮುಗಿದಿರುವವರು ದಯವಿಟ್ಟು ಕೂಡಲೇ ಚಂದಾ ಕಳಿಸಿ.

ಜೊತೆಗೆ ವರದಿ, ಲೇಖನ, ಕಥೆ, ಕವನ ಕಳಿಸಿ ಸಹಕರಿಸಿ.

ನೊಂದವರೆಲ್ಲರ ಬೆಳಕಾದ 'ಪಂಚಮ'ವನ್ನು ಬೆಳೆಸಿ.

—ಸಂಪಾದಕ

ಈ ಪತ್ರಿಕೆಯು ರಾಮದೇವ ರಾಕೆ ಅವರ ಸಂಪಾದಕತ್ವದಲ್ಲಿ, ವಿನ್ಯಾಸ ಪ್ರಿಂಟರ್ಸ್, ಮೈಸೂರು–9 ಇಲ್ಲಿ ಮುದ್ರಿಸಲ್ಪಟ್ಟು ಎಚ್ ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು,
ಅವರಿಂದ ಪ್ರಕಟಿಸಲ್ಪಟ್ಟಿತು, ವಿಳಾಸ : ಮಾಸ್ತಿಗುಡಿ, 2ನೇ ಕ್ರಾಸ್ ಅಶೋಕಪುರಂ, ಮೈಸೂರು–570008.